ನೆಹರೂ ಬಾಲ ಪುಸ್ತಕಾಲಯ–37

# ಸದಾ ಸಿದ್ಧನಾಗಿರು

ಉಮಾ ಆನಂದ್

ಅನುವಾದಕ:
ಎ. ಆರ್. ರಂಗರಾವ್

ಚಿತ್ರಗಳು:
ವೈಜಯಂತಿ ರಾನಡೆ



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ, ಹೊಸದೆಹಲಿ



# ಗೆಳೆಯರು

ಗಂಟೆಯೊಂದು ಜೋರಾಗಿ ಬಾರಿಸಿತು. ಅದರ ಶಬ್ದ ಅಡಗುವುದರೊಳಗೆ ಅನೇಕ ಬಾಗಿಲುಗಳು ತೆರೆದುಕೊಂಡು ಅವುಗಳಿಂದ ಹುಡುಗರು ಗುಂಪುಗುಂಪಾಗಿ ಹೊರ ಬಂದರು. ಪಂಜರದಿಂದ ಹೊರ ಬಂದ ಹಕ್ಕಿಗಳ ಹಾಗೆ ಅವರು ನಕ್ಕುನಲಿದಾಡುತ್ತಿದ್ದರು.

ಶಾಲೆಯ ಮೆಟ್ಟಿಲುಗಳ ಬಳಿ ಕಪಿಲ್ ಮತ್ತು ನವೀನ್ ಭೇಟಿಯಾದರು. ಅವರಿಬ್ಬರೂ ಆಪ್ತ ಸ್ನೇಹಿತರು. ಕಪಿಲ್ ನವೀನ್‌ಗಿಂತ ಎತ್ತರ. ಅವನು ಯಾವಾಗಲೂ ಸಂತೋಷವಾಗಿ ನಗುನಗುತ್ತಾ ಇರುತ್ತಿದ್ದ. ನವೀನ್ ತೆಳ್ಳನೆ ಹುಡುಗ. ಮುಖದಲ್ಲಿ ಗೆಲುವಾಗಲೀ ಉತ್ಸಾಹವಾಗಲೀ ಇರಲಿಲ್ಲ. "ಅಬ್ಬಾ, ಪರೀಕ್ಷೆ ಮುಗಿಯಿತು" ಅಂದ ಕಪಿಲ್, ದೊಡ್ಡ ಭಾರ ಇಳಿಸಿದವನ ಹಾಗೆ.

"ಕಪಿಲ್, ನೀನು ರಜೆಯಲ್ಲಿ ಪುನಃ ಸ್ಕೌಟ್ ಕ್ಯಾಂಪ್‌ಗೆ ಹೋಗುತ್ತಿದ್ದೀಯೆ, ಅಲ್ಲವೇ" ಎಂದು ನವೀನ್ ಕೇಳಿದ.

"ಇಲ್ಲ. ಈ ವರ್ಷ ಹೋಗುವುದಿಲ್ಲ. ಸಿಮ್ಲಾದ ಬಳಿ ನಮ್ಮ ಚಿಕ್ಕಪ್ಪ ಇದ್ದಾರೆ. ಅಲ್ಲಿಗೆ ಹೋಗುತ್ತೇನೆ. ಈ ಸಲ ಕ್ಯಾಂಪಿಗೆ ಬೇರೆ ಎರಡು ತಂಡಗಳನ್ನು ಆರಿಸಿದ್ದಾರೆ. ನಾವು ಸರದಿಯ ಮೇರೆಗೆ ಹೋಗಬೇಕು. ಸದಾ ಪುಸ್ತಕ ಹಿಡಿದು ಕೂಡುವುದರ ಬದಲು ನೀನೂ ಸ್ಕೌಟ್ ಆಗಬೇಕೆಂದು ನನ್ನ ಇಷ್ಟ, ನವೀನ್. ಇದು ನಿನಗೆ ಮನಸ್ಥೈರ್ಯ ಮತ್ತು ದೇಹ ದಾರ್ಢ್ಯತೆ ಕೊಡುತ್ತದೆ."

"ನನಗೇನೋ ಇಷ್ಟವೇ. ಆದರೆ ಅದು ಸಾಧ್ಯವಿಲ್ಲ. ಪ್ರತಿ ದಿನ ಸಂಜೆ ನಾನು ಅಂಗಡಿಯಲ್ಲಿ ನಮ್ಮ ತಂದೆಗೆ ಸಹಾಯ ಮಾಡಬೇಕು" ಎಂದು ನವೀನ್ ಹೇಳಿದ.

ಕಪಿಲ್ ಮುಂದೆ ಏನನ್ನೂ ಹೇಳಲಿಲ್ಲ. ಆದರೆ ಸಂಜೆ ತನ್ನ ತಂದೆಯನ್ನು ಕೇಳಿದ: "ನವೀನನನ್ನು ತಾರಕ್ಕೆ ಕರೆದುಕೊಂಡು ಹೋದರೆ ಚಿಕ್ಕಪ್ಪ ಏನಾದರೂ ಹೇಳುವರೇ?"

"ನೀನೇ ಚಿಕ್ಕಪ್ಪನಿಗೆ ಒಂದು ಪತ್ರ ಬರೆದು ಅವರ ಅಭಿಪ್ರಾಯವನ್ನು ತಿಳಿದುಕೊ" ಎಂದು ಕಪೂರ್ ಮಗನಿಗೆ ಸಲಹೆ ಕೊಟ್ಟರು. ಕಪಿಲ್ ಕೂಡಲೇ ಚಿಕ್ಕಪ್ಪನಿಗೆ ಒಂದು ಪೋಸ್ಟ್ ಕಾರ್ಡ್ ಬರೆದ. ಉತ್ತರಕ್ಕಾಗಿ ಕಾತುರದಿಂದ ಎದುರುನೋಡುತ್ತಿದ್ದ.

ಮೂರು ದಿನಗಳ ನಂತರ ಕಪಿಲ್‌ಗೆ ಅವರ ಚಿಕ್ಕಪ್ಪನಿಂದ ಪತ್ರ ಬಂದಿತು. ಅವರು ಹೀಗೆ ಬರೆದಿದ್ದರು:

ಪ್ರೀತಿಯ ಕಪಿಲ್,

ನಮ್ಮ ಊರಿಗೆ ನಿನ್ನ ಸ್ನೇಹಿತನನ್ನೂ ಕರೆದುಕೊಂಡು ಬಾ. ಬಹಳ ಸಂತೋಷ. ನಿನ್ನ ಹಾಗೆ ಅವನೂ ಒಳ್ಳೆಯ ಸ್ಕೌಟ್ ಇರಬೇಕು. ನೀವಿಬ್ಬರೂ ಒಂದೇ ಕೋಣೆಯಲ್ಲಿ ಇರಬಹುದು. ಕ್ಯಾಂಪ್‌ಗೆ ಸಿದ್ಧತೆ ಮಾಡಿಕೊಳ್ಳಿ. ನಿನ್ನ ಸೋದರಿ ರೇಖ ಈಗ 'ಗೈಡ್' ಆಗಿದ್ದಾಳೆ. ಅವಳು ಈಗ ಅಡಿಗೆ ಮಾಡುವುದರಲ್ಲಿ ತರಪೇತಿ ಪಡೆಯುತ್ತಿದ್ದಾಳೆ. ನಿನ್ನೆ ರಾತ್ರಿ ಅವಳದೇ ಅಡಿಗೆ. ಕರ್ರಗೆ ಸುಟ್ಟಿದ್ದ ಆಲೂಗಡ್ಡೆ ಪಲ್ಯ ಮತ್ತು ಸೀದುಹೋಗಿದ್ದ ಪುಲಾವ್ ಮಾಡಿದ್ದಳು. ಬಹಳ ರುಚಿಯಾಗಿತ್ತು! ಇನ್ನು ಮುಂದೆ ತನ್ನದೇ ಅಡಿಗೆ ಯೆಂದು ಅವಳು ಬೆದರಿಸುತ್ತಿದ್ದಾಳೆ. ಅದಕ್ಕೆ ಸಿದ್ಧನಾಗಿರು. ನಿನ್ನ ಚಿಕ್ಕಮ್ಮ ನಿನ್ನ ತಾಯಿಗೆ

ವಿಶ್ವಾಸಗಳನ್ನು ತಿಳಿಯಹೇಳಿದ್ದಾಳೆ. ನಿನ್ನ ತಂದೆ ಮತ್ತು ತಾಯಿಗೆ ನನ್ನ ನಮಸ್ಕಾರಗಳು.

ನಿಮ್ಮಿಬ್ಬರನ್ನೂ ನಾವು ಭಾನುವಾರ ಎದುರುನೋಡುತ್ತೇವೆ.

ನಿನ್ನ ಪ್ರೀತಿಯ ಚಿಕ್ಕಪ್ಪ,
ವಿಜಯ ಕಪೂರ್.

ಪತ್ರವನ್ನು ಓದಿ ಕಪಿಲ್ ಹಿಗ್ಗಿದ. "ನಾನು ಈಗಲೇ ಹೋಗಿ ನವೀನನನ್ನು ಕರೆಯುತ್ತೇನೆ" ಎಂದು ತಾಯಿಗೆ ಹೇಳಿದ.

ಕರ್ನಾಲ್ ಬಜಾರ್‌ನ ಮಧ್ಯದಲ್ಲಿದ್ದ ನವೀನನ ಅಂಗಡಿಗೆ ಹೋಗುವುದೆಂದರೆ ಕಪಿಲ್‌ಗೆ ಬಹಳ ಇಷ್ಟ. ಸುವಾಸನೆ ಬೀರುವ ಹೊಚ್ಚಹೊಸ ಧಾನ್ಯಗಳು, ಗಮ-ಗಮವೆನ್ನುವ ಸಿಹಿ ತಿಂಡಿಗಳು. ಅಂಗಡಿಗೆ ಬರುವ-ಹೋಗುವ ಜನರ ಗಿಜಿಗಿಜಿ ಗುಂಪು. ಇವುಗಳನ್ನು ನೋಡಲು ಅವನಿಗೆ ಬಲು ಆನಂದ.

ಅಂದು ಅಂಗಡಿಯಲ್ಲಿ ನವೀನ್ ಒಬ್ಬನೇ ಇದ್ದ. ಆ ಸಮಯಕ್ಕೆ ಸರಿಯಾಗಿ ಕಪಿಲ್ ಅಲ್ಲಿಗೆ ಹೋದ. ಕಪಿಲ್‌ನನ್ನು ಕಂಡು ನವೀನ್‌ಗೆ ಆಶ್ಚರ್ಯ ಮಿಶ್ರಿತ ಸಂತೋಷ.

"ನಿನಗೊಂದು ಆಮಂತ್ರಣ ಬಂದಿದೆ" ಅಂದ ಕಪಿಲ್.

"ನನಗೆ? ಯಾರಿಂದ?" ಎಂದು ಆಶ್ಚರ್ಯದಿಂದ ಕೇಳಿದ ನವೀನ್.

"ರಜೆಯಲ್ಲಿ ನಮ್ಮ ಚಿಕ್ಕಪ್ಪನ ಊರಿಗೆ ಹೋಗುವುದಾಗಿ ಹೇಳಿದ್ದೆ. ಸಿಮ್ಲಾದ ಬಳಿ ಇರುವ ಒಂದು ಶಾಲೆಯಲ್ಲಿ ನಮ್ಮ ಚಿಕ್ಕಪ್ಪ ಡ್ರಿಲ್ ಮಾಸ್ಟರ್. ನಿನ್ನನ್ನೂ ಕರೆದುಕೊಂಡು ಬರಲು ಹೇಳಿದ್ದಾರೆ. ನೀನು ಸಹ ಒಳ್ಳೆಯ ಸ್ಕೌಟ್ ಎಂದು ಅವರು ಭಾವಿಸಿದ್ದಾರೆ. ನಿನ್ನ ತಂದೆ-ತಾಯಿಗಳು ನಿನ್ನನ್ನು ಕಳುಹಿಸಿಕೊಡುತ್ತಾರಾ?"

"ಒಪ್ಪಿದರೂ ಒಪ್ಪಬಹುದು. ನಿನ್ನೊಡನೆ ಬರಲು ನನಗೆ ಬಹಳ ಇಷ್ಟ. ನಾನು ಇದುವರೆಗೆ ಬೆಟ್ಟಪ್ರದೇಶವನ್ನೇ ನೋಡಿಲ್ಲ. ತಡಿ, ನಮ್ಮ ತಂದೆಯವರನ್ನು ಕರೆಯುತ್ತೇನೆ."

ಅವರುಗಳಿಗೆ ಆಶ್ಚರ್ಯವಾಗುವಂತೆ ಅವರ ತಂದೆ ಕೂಡಲೇ ಒಪ್ಪಿದರು ಮತ್ತು ಕಪಿಲ್‌ಗೆ ಹೇಳಿದರು: "ನವೀನನ ಆರೋಗ್ಯದ್ದೇ ನಮಗೆ ದೊಡ್ಡ ಚಿಂತೆ. ಸ್ಥಳ ಬದಲಾವಣೆ ಅವನಿಗೆ ಒಳ್ಳೆಯದಾಗುತ್ತದೆ. ನಿಮ್ಮ ಚಿಕ್ಕಪ್ಪನಿಗೆ ನಮ್ಮ ವಂದನೆಗಳನ್ನು ತಿಳಿಸು."

"ನಾವು ಭಾನುವಾರ ಬೆಳಿಗ್ಗೆ ಆರು ಗಂಟೆಯ ಬಸ್ಸಿನಲ್ಲಿ ಹೊರಡುತ್ತೇವೆ. ಮಧ್ಯಾಹ್ನದ ವೇಳೆಗೆ ತಾರವನ್ನು ತಲುಪುತ್ತೇವೆ. ನಮ್ಮ ಚಿಕ್ಕಪ್ಪನ ಮನೆ ತಾರ ಬಸ್ ನಿಲ್ದಾಣದಿಂದ ಕೇವಲ ಒಂದು ಫರ್ಲಾಂಗ್ ದೂರದಲ್ಲಿದೆ. ನಮ್ಮ ಚಿಕ್ಕಮ್ಮ ಒಂದು ಹಸುವನ್ನು ಸಾಕಿದ್ದಾರೆ. ಅವರು ತರಕಾರಿಯನ್ನು ಸಹ ಬೆಳೆಯುತ್ತಾರೆ. ನವೀನ್ ಆರೋಗ್ಯವಂತನಾಗಿಯೂ ದೃಢಕಾಯನಾಗುವಂತೆಯೂ ನಾನು ನೋಡಿಕೊಳ್ಳುತ್ತೇನೆ" ಎಂದು ಕಪಿಲ್ ನುಡಿದ.

# ಕಬ್‌ಗಳು ಮತ್ತು ಸ್ಕೌಟ್‌ಗಳು

ಭಾನುವಾರ ಬೆಳಿಗ್ಗೆ ಆರು ಗಂಟೆಗೆ ಮುಂಚೆ ಇಬ್ಬರು ಗೆಳೆಯರು ಬಸ್ ನಿಲ್ದಾಣಕ್ಕೆ ಬಂದರು. ಕಪಿಲ್ ಬೆನ್ನಿಗೆ ಕಟ್ಟಿಕೊಂಡಿರುವ ಒಂದು ಚೀಲವನ್ನು ಮತ್ತು ಒಂದು ಸೂಟ್‌ಕೇಸನ್ನು ತಂದಿದ್ದ. ನವೀನ್ ಅನೇಕ ಕೊಳಕು ಗಂಟುಗಳನ್ನು ತಂದಿದ್ದ.

ಇಬ್ಬರೂ ಬಸ್ ಏರಿದರು. ಸಾಮಾನುಗಳನ್ನು ತಮ್ಮ ಸೀಟ್‌ಗಳ ಕೆಳಗೆ ತಳ್ಳಿದರು. "ನವೀನ್ ಇಷ್ಟೊಂದು ಗಂಟುಗಳನ್ನು ಏಕೆ ತಂದಿದ್ದೀಯೆ?" ಎಂದು ಕಪಿಲ್ ಕೇಳಿದ.



ನವೀನ್ ಒಂದು ದೊಡ್ಡ ಬುಟ್ಟಿಯನ್ನು ತೋರಿಸಿ, "ಇದನ್ನು ನಮ್ಮ ತಾಯಿ ಕೊಟ್ಟಿದ್ದಾರೆ. ಈ ಚಿಕ್ಕ ತಗಡಿನ ಪೆಟ್ಟಿಗೆಯಲ್ಲಿ ನನ್ನ ಬಟ್ಟೆಗಳಿವೆ. ಉಳಿದ ಸಾಮಾನುಗಳೆಲ್ಲ ನಿಮ್ಮ ಚಿಕ್ಕಮ್ಮನಿಗೆ. ಈ ಬುಟ್ಟಿಯಲ್ಲಿ ಮಾವಿನ ಹಣ್ಣುಗಳಿವೆ. ಈ ದೊಡ್ಡ ಡಬ್ಬದಲ್ಲಿ ಬಿಸ್ಕತ್ತುಗಳಿವೆ. ಈ ಚೀಲದಲ್ಲಿರೋದು ಬೆಲ್ಲದ ಪುಡಿ" ಅಂದ.



ಊರು ತಲಪಿದ ಮೇಲೆ ತಿನ್ನಲು ಅನೇಕ ಪದಾರ್ಥಗಳನ್ನು ನವೀನ್ ತಂದಿರುವುದನ್ನು ಕಂಡು ಕಪಿಲ್‌ಗೆ ಬಹಳ ಸಂತೋಷವಾಯಿತು.

ಕಂಡಕ್ಟರ್ ಸೀಟಿ ಊದಿದ. ಪ್ರಯಾಣಿಕರು ಓಡಿ ಬಂದು ಸರಸರ ಬಸ್ ಹತ್ತಿದರು. ಬಸ್ ಹೊರಟಿತು. ಇಬ್ಬರು ಗೆಳೆಯರು ಆರಾಮವಾಗಿ ಕುಳಿತರು. ನವೀನ್ ಮೊದಲು ಮಾತು ಶುರು ಮಾಡಿದ. "ನಾನೊಬ್ಬ ಸ್ಕೌಟ್ ಎಂದು ನಿಮ್ಮ ಚಿಕ್ಕಪ್ಪ ಭಾವಿಸಿದ್ದಾರೆ, ಅವರಿಗೆ ಖಂಡಿತ ನಿರಾಶೆಯಾಗುತ್ತದೆ. ಹೋಗಲಿ ಒಬ್ಬ ಸ್ಕೌಟ್ ಮಾಡಬೇಕಾದ ಕೆಲಸ ಗಳೇನು ಎಂಬುದನ್ನಾದರೂ ನನಗೆ ತಿಳಿಸು."

"ನಾನು ಎರಡು ವರ್ಷಗಳಿಂದ ಸ್ಕೌಟ್ ಆಗಿದ್ದೇನೆ. ಎರಡನೇ ವರ್ಷದ ಸ್ಕೌಟ್ ಪರೀಕ್ಷೆಗಳಲ್ಲಿ ಪಾಸಾಗಿದ್ದೇನೆ. ಪ್ರಥಮ ಚಿಕಿತ್ಸೆ ಮತ್ತು ಸಂಕೇತಗಳಲ್ಲದೇ ಇತರ ಅನೇಕ ವಿಷಯಗಳನ್ನು ಕಲಿತಿದ್ದೇನೆ. ನಾನು ಮೊದಲು ಕಬ್ ಆಗಿ, ನಂತರ ಸ್ಕೌಟ್ ಆದೆ. ಅದು ನಿನಗೆ ಗೊತ್ತಿರಬಹುದು."

"ಕಬ್ ಅಂದರೆ?"

"ಚಿಕ್ಕ ಹುಡುಗರಿಗಾಗಿ ಬೇರೆ ಕೂಟ ಇರುತ್ತದೆ. ಆ ಕೂಟದ ಹುಡುಗರನ್ನು ಕಬ್ ಗಳೆಂದು ಕರೆಯುತ್ತೇವೆ. ನಾನು ಏಳು ವರ್ಷದವನಿದ್ದಾಗಲೇ ಕಬ್ ಆದೆ. ನನ್ನ ಹನ್ನೆರಡನೇ ವಯಸ್ಸಿನಲ್ಲಿ ಸ್ಕೌಟ್ ಆದೆ. ಕಬ್ ಆಗಿರುವಾಗ ಅದೆಷ್ಟು ತಮಾಷೆಯಾಗಿರುತ್ತದೆ ಗೊತ್ತೆ? ಚಿಕ್ಕ ಹುಡುಗರಿಗಾಗಿ ಕಬ್‌ಗಳ ಕೂಟವನ್ನು ರಚಿಸಬೇಕೆಂಬ ಮೊದಲ ಆಲೋಚನೆ ಬಂದಿದ್ದು ಲಾರ್ಡ್ ಬೆಡನ್ ಪೊವೆಲ್ ಎಂಬಾತನಿಗೆ. ಭಾರತೀಯ ಬಾಲಕನೊಬ್ಬನ ಕಥೆಯನ್ನು ಕೇಳಿದ ಮೇಲೆ ಅವನಿಗೆ ಈ ಯೋಚನೆ ಹೊಳೆಯಿತು.

"ಲಾರ್ಡ್ ಬೆಡೆನ್ ಪೊವೆಲ್ ಯಾರು? ನೀನು ಹೇಳಿದ ಆ ಕಥೆ ಯಾವುದು?"

"ಲಾರ್ಡ್ ರಾಬರ್ಟ್ ಬೆಡೆನ್ ಪೊವೆಲ್ ಇಂಗ್ಲೆಂಡಿನವನು. ಅವನು 1907ರಲ್ಲಿ ಸ್ಕೌಟ್ ಪರಂಪರೆಯನ್ನು ಪ್ರಾರಂಭಿಸಿದ. ನಗರದಲ್ಲಿರುವ ನಮ್ಮಂತಹ ಹುಡುಗರಿಗೆ ಪ್ರಕೃತಿ ಹಾಗೂ ಮೃಗ–ಪಕ್ಷಿಗಳ ಬಗ್ಗೆ ಎಷ್ಟೋ ವಿಷಯಗಳು ತಿಳಿದಿರುವುದಿಲ್ಲ. ನಾವು ಕಾಡಿಗೆ ಹೋದರೆ ನಮ್ಮ ಸ್ಥಿತಿ ಹೇಗಾಗುತ್ತದೆ? ನಮ್ಮನ್ನು ನಾವು ನೋಡಿಕೊಳ್ಳುವುದೇ ಕಷ್ಟವಾಗುತ್ತದೆ. ಹುಡುಗರು ಸ್ವತಂತ್ರವಾಗಿ ಜೀವಿಸುವುದನ್ನು ಕಲಿಯಬೇಕು. ಯಾವುದಕ್ಕೂ ಹೆದರಬಾರದು. ಯಾವಾಗಲೂ ಇನ್ನೊಬ್ಬರಿಗೆ ಸಹಾಯ ಮಾಡಬೇಕು. ಇದರಿಂದ ಅವರು ದೊಡ್ಡವರಾದ ಮೇಲೆ ಸತ್ಪ್ರಜೆಗಳಾಗುತ್ತಾರೆ ಎಂದು ಲಾರ್ಡ್ ಪೊವೆಲ್ ನಂಬಿದ್ದ. ಇಂದು ಪ್ರಪಂಚದ ಅನೇಕ ದೇಶಗಳಲ್ಲಿ ಸ್ಕೌಟ್‌ಗಳಿದ್ದಾರೆ. ಈ ಸ್ಕೌಟ್ ಚಳವಳಿ ವಿಶ್ವಾದ್ಯಂತ ಸೋದರ ಭಾವನೆಯನ್ನು ಬೆಳೆಸುತ್ತದೆ."

"ನಾನು ತಿಳಿಸಿದ ಕಥೆಯನ್ನು ರುಡ್ಯಾರ್ಡ್ ಕಿಪ್ಲಿಂಗ್ ಎಂಬ ಇಂಗ್ಲೆಂಡಿನವನೊಬ್ಬನು ಬರೆದನು. ಅವನು ಅನೇಕ ವರ್ಷಗಳ ಕಾಲ ಭಾರತದಲ್ಲಿ ನೆಲೆಸಿದ್ದ. ಅವನು "ದಿ ಜಂಗಲ್ ಬುಕ್" ಎಂಬ ಒಂದು ಕಥೆ ಪುಸ್ತಕವನ್ನು ಬರೆದ. ಅದನ್ನು ನೀನು ಓದಿದ್ದೀಯಾ?"

"ಇಲ್ಲ. ಅದನ್ನು ಓದಬೇಕು. ಅದು ಯಾವುದರ ಕಥೆ?"

"ನಮ್ಮ ಚಿಕ್ಕಪ್ಪನ ಬಳಿ ಈ ಪುಸ್ತಕ ಇರಬೇಕು. ಅದನ್ನು ನೀನು ಓದುವಿಯಂತೆ. ಈ ಕಥೆ ಮೌಗ್ಲಿ ಎಂಬ ಹಳ್ಳಿ ಹುಡುಗನನ್ನು ಕುರಿತದ್ದು. ಈ ಹುಡುಗನನ್ನು ಕಾಡುತೋಳಗಳ ಒಂದು ಸಂಸಾರ ಸಲಹಿದ ಕಥೆ ಅದು."

"ಅದು ಹೇಗಾಯಿತು?"

"ಮೌಗ್ಲಿಯನ್ನು ಅವನ ತಂದೆ ತಾಯಿಗಳು ಒಂದು ಕಾಡಿಗೆ ಕರೆದುಕೊಂಡು ಹೋಗಿದ್ದರು. ಆಗ ಅವನು ಚಿಕ್ಕ ಮಗು. ಅವರು ಕಾಡಿನಲ್ಲಿ ರಾತ್ರಿ ತಂಗಿದ್ದರು. ಆಗ ಒಂದು ಹುಲಿ ಆಹಾರವನ್ನು ಹುಡುಕಿಕೊಂಡು ಹೊರಟಿತ್ತು. ಅವರು ಉರಿಸುತ್ತಿದ್ದ ಬೆಂಕಿ ಶಮನವಾಗುತ್ತಿತ್ತು. ಹುಲಿ ಬೆಂಕಿಯ ಮೇಲೆ ಹಾರಿತು. ಅದರ ಕೈಕಾಲುಗಳು ಸುಟ್ಟುಹೋದುವು. ಹುಲಿ ನೋವಿನಿಂದ ಘರ್ಜಿಸಿತು. ಘರ್ಜನೆಯನ್ನು ಕೇಳಿ ಮೌಗ್ಲಿಯ ತಂದೆತಾಯಿಗಳು ಗಾಬರಿಗೊಂಡು ಎದ್ದರು. ಈ ಗಡಿಬಿಡಿಯಲ್ಲಿ ಮಗು ದೇಕುತ್ತಾ ಹೋಗಿ ಕಾಡಿನಲ್ಲೇ ಕಣ್ಮರೆಯಾಯಿತು. ಒಂದು ತಾಯಿತೋಳ ಆ ಮಗುವನ್ನು ಕಂಡು, ತನ್ನ ಗುಹೆಗೆ ಕೊಂಡೊಯ್ದಿತು. ಅಲ್ಲಿ ಮೌಗ್ಲಿ ತೋಳದ ಮರಿಗಳ ಜೊತೆಯಲ್ಲಿ ಆಟವಾಡಲಾರಂಭಿಸಿದ. ಆ ತೋಳಗಳ ಜೊತೆಯಲ್ಲೇ ಅವನು ಬೆಳೆದ. ಅವುಗಳ ಗುಂಪಿನಲ್ಲೇ ಇದ್ದುಕೊಂಡು ಬೇಟೆಯಾಡುವುದನ್ನು ಕಲಿತ. ಇತರ ಪ್ರಾಣಿಗಳ ಮತ್ತು ಪಕ್ಷಿಗಳ ಭಾಷೆ ಮತ್ತು ಸಂಕೇತಗಳನ್ನು ಕಲಿತ."

"ಅವನಿಗೆ ಇವುಗಳನ್ನು ಯಾರು ಕಲಿಸಿದರು?"

"ಅವನ ಇಬ್ಬರು ಸ್ನೇಹಿತರು. ಭಾಲೂ ಎಂಬ ಮುದಿ ಕರಡಿ ಮತ್ತು ಭಗೀರ ಎಂಬ ಜಾಣ ಚಿರತೆ. ತಾರಗೆ ಹೋದ ಮೇಲೆ ಪುಸ್ತಕವನ್ನು ಓದಿ ನೀನೇ ಎಲ್ಲ ವಿಷಯಗಳನ್ನು ತಿಳಿದುಕೊ" ಎಂದ ಕಪಿಲ್.



# ಸದಾ ಸಿದ್ಧನಾಗಿರು

ಅಚನ್ನ ಎಂಬ ಊರು ಬಂತು ಬಸ್ಸು ಅಂಗಡಿ ಬೀದಿಯ ಮಧ್ಯದಲ್ಲಿ ನಿಂತಿತು. ಮೂರು ಜನ ಬಸ್ಸಿನಿಂದ ಇಳಿದರು. ಕಂಡಕ್ಟರ್ ಸೀಟಿ ಊದಿದ.

ಬಸ್ಸು ಹೊರಡಬೇಕು. ಅಷ್ಟರಲ್ಲಿ ಅಜ್ಜನೊಬ್ಬ ಬಸ್ಸನ್ನು ನಿಲ್ಲಿಸುವಂತೆ ಜೋರಾಗಿ ಕೂಗಿದ.

ಡ್ರೈವರ್ ಕ್ಷಣಕಾಲ ಬಸ್‌ಅನ್ನು ನಿಲ್ಲಿಸಿದ. ಅಜ್ಜ ಮೊದಲು ಬಸ್ ಹತ್ತಿದ. ಅವನ ಹಿಂದೆ ದಪ್ಪ ಹೆಂಗಸು ಮತ್ತು ಒಬ್ಬಳು ಚಿಕ್ಕ ಹುಡುಗಿ ಹತ್ತಿದರು. ಬಸ್ ಹೊರಟ ರಭಸಕ್ಕೆ ಆ ಹುಡುಗಿ ಮುಗ್ಗರಿಸಿ ಬಿದ್ದಳು. ಸೀಟಿನ ತುದಿಗೆ ಅವಳ ಮಂಡಿ ತರಚಿ ಗಾಯವಾಯಿತು. ಹುಡುಗಿ ಜೋರಾಗಿ ಅತ್ತಳು.

ಬಸ್‌ಅನ್ನು ನಿಲ್ಲಿಸುವಂತೆ ಅಜ್ಜ ಕಂಡಕ್ಟರನನ್ನು ಕೇಳಿದ.

ಮುಂದಿನ ಸ್ಥಳದ ವರೆಗೆ ಬಸ್ ನಿಲ್ಲಿಸಲು ಸಾಧ್ಯವಿಲ್ಲವೆಂದು ಅವನು ನುಡಿದ.

ಹುಡುಗಿಯ ಅಳು ಮತ್ತಷ್ಟು ಜೋರಾಯಿತು. ಗಾಯದಿಂದ ಬರುತ್ತಿದ್ದ ರಕ್ತವನ್ನು ಕಂಡು ಹುಡುಗಿಯ ತಾಯಿ ಚೀರಿದಳು.

ತನ್ನ ಸ್ಥಳದಿಂದ ಮುಂದಕ್ಕೆ ಬಗ್ಗಿ 'ನಾನು ಸಹಾಯ ಮಾಡಬಲ್ಲೆ' ಎಂದು ಕಪಿಲ್ ಕೂಗಿದ.

ಕಪಿಲ್ ತನ್ನ ಚೀಲವನ್ನು ಬಿಚ್ಚಿದ. ಅದರಿಂದ ಒಂದು ಚಿಕ್ಕ ಪೆಟ್ಟಿಗೆಯನ್ನು ಹೊರ ತೆಗೆದ. ಅದರಲ್ಲಿ ಎಲ್ಲ ಸಾಮಗ್ರಿಗಳನ್ನು ಅಚ್ಚುಕಟ್ಟಾಗಿ ಜೋಡಿಸಿ ಇಟ್ಟಿದ್ದ. ಪೆಟ್ಟಿಗೆಯಿಂದ ಒಂದು ಚಿಕ್ಕ ಸೀಸೆಯನ್ನು ತೆಗೆದ. "ಗಾಯವನ್ನು ಸ್ಪಿರಿಟ್‌ನಿಂದ ಸ್ವಚ್ಛ ಮಾಡುತ್ತೇನೆ. ಸ್ವಲ್ಪ ಉರಿಯಾಗಬಹುದು. ಮಗುವನ್ನು ಹಿಡಿದುಕೊಳ್ಳುತ್ತೀರಾ?" ಎಂದು ಕಪಿಲ್ ತಾಯಿಗೆ ಹೇಳಿದ.

ಕಪಿಲ್ ಒಂದು ಚೂರು ಹತ್ತಿಯನ್ನು ತೆಗೆದು ಅದಕ್ಕೆ ಸ್ಪಿರಿಟ್ ಸುರಿದು ಗಾಯವನ್ನು ಶೀಘ್ರವಾಗಿ ಹಾಗೂ ಗಟ್ಟಿಯಾಗಿ ಉಜ್ಜಿ ಕೊಳೆ ತೆಗೆದ. ಹುಡುಗಿ ಅಳುವುದರಲ್ಲಿದ್ದಳು. ಮತ್ತೊಂದು ಕೈಲಿದ್ದ ಚಿಕ್ಕ ಸೀಸೆಯನ್ನು ತೋರಿಸಿದ. ಅದರಲ್ಲಿ ಕೆಂಪು ಬಣ್ಣದ ದ್ರವ ತುಂಬಿತ್ತು. "ಇಲ್ಲಿ ನೋಡು ಈ ಕೆಂಪು ಬಣ್ಣವನ್ನು ನಿನ್ನ ಮಂಡಿಗೆ ಹಚ್ಚಿದರೆ, ನೀನು ತೊಟ್ಟಿರುವ ಕೆಂಪು ಫ್ರಾಕ್‌ಗೆ ಎಷ್ಟು ಚೆನ್ನಾಗಿ ಕಾಣುತ್ತದೆ ಗೊತ್ತೆ? ಎಂದು ಉಪಾಯ ಮಾಡುತ್ತಾ, ಕಪಿಲ್ ಮಗುವಿನ ಮಂಡಿಗೆ ಕೆಂಪು ಔಷಧವನ್ನು ಸವರಿದ.

"ನೀನು ಇನ್ನೂ ಚಿಕ್ಕ ಹುಡುಗ. ಆಗಲೇ ಇಷ್ಟೆಲ್ಲಾ ಸಲಕರಣೆಗಳು ನಿನ್ನ ಬಳಿ ಹೇಗಪ್ಪ ಬಂತು? ವೈದ್ಯಕೀಯ ವಿದ್ಯಾರ್ಥಿಯಾಗಲು ನೀನು ಬಹಳ ಸಣ್ಣವನು" ಎಂದು ಅಜ್ಜ ಕೇಳಿದ.

ಕಪಿಲ್ ನಗುತ್ತಾ ಹೇಳಿದ, "ನನಗಿನ್ನೂ ಹದಿನಾಲ್ಕು ವರ್ಷಗಳು. ನಾನೊಬ್ಬ ಸ್ಕೌಟ್. ಸದಾ ಸನ್ನದ್ಧನಾಗಿರುವುದೇ ಆದರ್ಶ ಸ್ಕೌಟ್‌ನ ಲಕ್ಷಣ. ಆದ್ದರಿಂದ ನಾನು ಪ್ರಯಾಣ ಮಾಡುವಾಗ ಪ್ರಥಮ ಚಿಕಿತ್ಸೆ ಉಪಕರಣಗಳು ಮಂತ್ರಿತರ ಸಲಕರಣೆಗಳನ್ನು ಇಟ್ಟುಕೊಂಡೇ ಇರುತ್ತೇನೆ."

"ಓಹೋ ! ನೀನು ಒಬ್ಬ ಸ್ಕೌಟೋ ! ಒಳ್ಳೆಯದು. ನಿನಗೆ ಧನ್ಯವಾದಗಳು" ಎಂದು ಅಜ್ಜ ಹೇಳಿದ.

ಸ್ವಲ್ಪ ಸಮಯದ ನಂತರ ಬಸ್ಸು ಕಾಲ್ಕಾದಲ್ಲಿ ನಿಂತಿತು.

ಅಜ್ಜ, ಹೆಂಗಸು ಮತ್ತು ಹುಡುಗಿ ಬಸ್ಸಿನಿಂದ ಇಳಿದರು. ಕಾಲ್ಕಾದಲ್ಲಿ ಬಸ್ಸು ಇಪ್ಪತ್ತು ನಿಮಿಷಗಳ ಕಾಲ ನಿಲ್ಲುವುದೆಂದೂ, ಪ್ರಯಾಣಿಕರು ಆರಾಮವಾಗಿ ಕುಳಿತು ಫಲಹಾರ ಮಾಡಬಹುದೆಂದೂ ಕಂಡಕ್ಟರ್ ಕೂಗಿ ಹೇಳಿದ.

ಇಬ್ಬರು ಹುಡುಗರು ಬಸ್ಸಿನಿಂದ ಇಳಿದು ಆಲೂ ಪೂರಿಯನ್ನು ತಿನ್ನಲು ಸಮೀಪದ ಅಂಗಡಿಗೆ ಹೋದರು.





# ತಾರದ ತೋಟದಲ್ಲಿ

ಕಾಲ್ಕಾದಿಂದ ಮುಂದಿನ ಪ್ರಯಾಣ ನವೀನನಿಗೆ ಆನಂದಮಯವಾಗಿತ್ತು. ರಸ್ತೆಯ ಏರಿಳಿತಗಳು; ಒಂದಾದ ಮೇಲೊಂದು ಬರುವ ತಿರುವುಗಳು; ಒಂದೊಂದು ತಿರುವಿಗೂ ಕಾಣುವ ಹೊಸ ಹೊಸ ಬೆಟ್ಟ ಶ್ರೇಣಿಗಳು. ಬೆಟ್ಟಗಳು ದೂರದ ಗಗನವನ್ನು ಮುಟ್ಟುತ್ತಿರುವ ಅನುಭವ. ಹೊಳೆಯುವ ಬಿಸಿಲು, ಮಧ್ಯೆ ಮಧ್ಯೆ ಬೀಸುವ ತಂಗಾಳಿ, ತಗ್ಗಿನಲ್ಲಿ ಬೆಳೆದ ಪೊದರುಗಳು ಹಾಗೂ ಕುರುಚಲು ಗಿಡಗಳು, ಮುಂದೆ ಸಾಗಿದಂತೆ ಎತ್ತರದ ಮರಗಳ ಹಚ್ಚಹಸುರಿನ ಕಾಡು. ಇದ್ದಕ್ಕಿದ್ದಂತೆ ಗೋಚರಿಸುವ ಪುಷ್ಪರಾಶಿ—ಈ ಸುಂದರ ದೃಶ್ಯವನ್ನು ಕಂಡು ನವೀನ್ ಚಕಿತನಾದ.

"ಆಹಾ, ಎಂತಹ ರಮ್ಯವಾದ ಕಾಡು !" ನವೀನ್ ಭಾವಪರವಶನಾಗಿ ನುಡಿದ.

"ಎತ್ತರವಾದ ಆ ಕಪ್ಪು ಮರಗಳೇ ದೇವದಾರು ಮರಗಳು. ಆ ಮರಗಳಿಗೆ ಎಲೆಗಳಿಲ್ಲ. ಬರೀ ಮುಳ್ಳುಗಳೇ" ಅಂದ ಕಪಿಲ್.

"ಕೆಂಪಗೆ ಕಾಣುತ್ತಿವೆಯಲ್ಲಾ, ಅವು ಗುಲಾಬಿ ಹೂವುಗಳೇ?"

ಕಪಿಲ್ ನಕ್ಕು, "ಛೆ ಛೆ ಅಲ್ಲ. ಅವು ರೊಡೋಡೆಂಡ್ರಾನ್. ಮೇ ತಿಂಗಳಲ್ಲಿ ಎಲ್ಲೆಲ್ಲಿ ನೋಡಿದರೂ ಇದೇ ಹೂವುಗಳು. ಕಾಡಿಗೆ ಕಾಡೇ ಕೆಂಪೇರಿದಂತೆ ಕಾಣುತ್ತದೆ. ಈಗ ಜೂನ್ ತಿಂಗಳಾದ್ದರಿಂದ ಹೂವುಗಳು ಕಡಿಮೆಯಾಗುತ್ತಿವೆ."

"ಸ್ಕೌಟ್‌ಗೆ ಸೇರಿ ಮರಗಿಡಗಳು ಮತ್ತು ಫಲಪುಷ್ಪಗಳ ವಿಷಯವನ್ನು ಸಹ ನೀನು ಕಲಿತಿರಬೇಕು. ಅಲ್ಲವೇ ಕಪಿಲ್?" ಎಂದು ನವೀನ್ ಕೇಳಿದ.

"ಪ್ರಕೃತಿ ಜ್ಞಾನಕ್ಕಾಗಿ ನನಗೆ ಒಂದು ಬ್ಯಾಡ್ಜ್ ಸಹ ಸಿಕ್ಕಿದೆ" ಅಂದ ಕಪಿಲ್. ಇಬ್ಬರೂ ನಕ್ಕರು. "ಅಗೊ ತಾರ ಬಂದೇ ಬಿಟ್ಟಿತು. ನಮ್ಮನ್ನು ಕರೆದೊಯ್ಯಲು ಅವರೆಲ್ಲ ಬಸ್ ನಿಲ್ದಾಣಕ್ಕೆ ಬಂದಿರಬಹುದು" ಅಂದ ಕಪಿಲ್.



ಬಸ್ ತಾರ ನಿಲ್ದಾಣದಲ್ಲಿ ನಿಂತಿತು. ಹನ್ನೆರಡು ವರ್ಷದ ಚಿಕ್ಕ ಹುಡುಗಿಯೊಬ್ಬಳು ಬಸ್ಸಿನೊಳಗಿದ್ದ ಕಪಿಲ್‌ನನ್ನು ಥಕ್ಕನೆ ಗುರುತಿಸಿದಳು. "ಕಪಿಲಣ್ಣ ಅಲ್ಲಿದ್ದಾನೆ" ಎಂದು ಧ್ವನಿ ಎತ್ತರಿಸಿ ಕೂಗಿದಳು. ಕಣ್ಣುಗಳಲ್ಲಿ ಕಾಂತಿ ತುಂಬಿದ್ದ ಆ ಹುಡುಗಿ ಬಸ್ಸಿನ ಬಾಗಿಲನ್ನು ತೆರೆದು ಚಂಗನೆ ಒಳಗೆ ನೆಗೆದಳು.

"ರೇಖಿ, ಎಷ್ಟು ಎತ್ತರವಾಗಿಬಿಟ್ಟಿದ್ದೀಯೇ ನೀನು" ಅಂದ ಕಪಿಲ್.

"ನಿನ್ನಷ್ಟು ಎತ್ತರವಂತೂ ಆಗಿಲ್ಲ" ಎಂದು ಆ ಹುಡುಗಿ ನಗುತ್ತಾ ನುಡಿದಳು. "ಈ ಬುಟ್ಟಿಯನ್ನು ನಾನು ತೆಗೆದುಕೊಳ್ಳುತ್ತೇನೆ" ಎಂದಳು.

"ಇವನೇ ನವೀನ್. ಚಿಕ್ಕಮ್ಮನಿಗಾಗಿ, ಇವನು ಏನೇನೋ ಪದಾರ್ಥಗಳನ್ನು ತಂದಿದ್ದಾನೆ. ಅಂದ ಹಾಗೆ ವಿಜಯ ಚಿಕ್ಕಪ್ಪ ಎಲ್ಲಿ?"

ಬಳಿಯಲ್ಲೇ ನಿಂತಿದ್ದ ವಿಜಯ ಚಿಕ್ಕಪ್ಪ ಹೇಳಿದರು, "ನಾನು ಇಲ್ಲೇ ಇದ್ದೀನಿ. ಮೊದಲು ಸಾಮಾನುಗಳನ್ನು ಇಳಿಸಿ. ಬಳಿಕ ಮಾತನಾಡಿ."

ಸಾಮಾನುಗಳನ್ನು ಇಳಿಸಿದ ಮೇಲೆ ಬಸ್ಸು ಸಿಪ್ಲಾದ ಕಡೆ ಹೊರಟಿತು.



ವಿಜಯ ಚಿಕ್ಕಪ್ಪ ಕಪಿಲ್‌ನ ಬೆನ್ನು ತಟ್ಟಿ, "ಕಪಿಲ್, ನೀನು ಬಹಳ ಚೆನ್ನಾಗಿ ಕಾಣಿಸುತ್ತಿದ್ದೀಯ. ಹೆಚ್ಚುಕಡಿಮೆ ನನ್ನ ಎತ್ತರಕ್ಕೆ ಬೆಳೆದಿದ್ದೀಯೆ" ಅಂದರು.

"ಇವನೇ ನನ್ನ ಸ್ನೇಹಿತ ನವೀನ್" ಎಂದು ಕಪಿಲ್ ತನ್ನ ಚಿಕ್ಕಪ್ಪನಿಗೆ ಪರಿಚಯ ಮಾಡಿಸಿದ.

"ನನ್ನನ್ನು ನಿಮ್ಮ ಊರಿಗೆ ಕರೆಸಿಕೊಂಡಿದ್ದಕ್ಕಾಗಿ ಬಹಳ ವಂದನೆಗಳು" ಎಂದು ನವೀನ್ ನಾಚಿಕೆಯಿಂದ ನುಡಿದ.

"ನೀನು ಕಪಿಲ್ ಜೊತೆ ಬಂದಿದ್ದು ನನಗೆ ಬಹಳ ಸಂತೋಷ" ವಿಜಯ ಚಿಕ್ಕಪ್ಪ ಹೇಳಿದರು.

"ಕಪಿಲ್, ಪರೀಕ್ಷೆಯಲ್ಲಿ ಹೇಗೆ ಮಾಡಿದ್ದೀಯೆ?"

"ನಾನು ಪಾಸಾಗುತ್ತೇನೆ. ನವೀನ್ ಎಂದಿನಂತೆ ಮೊದಲ ಸ್ಥಾನ ಪಡೆಯುವುದರಲ್ಲಿ ಸಂಶಯವಿಲ್ಲ" ಅಂದ ಕಪಿಲ್.

ಎಲ್ಲರೂ ಕಾಲುದಾರಿಯಲ್ಲಿ ನಡೆದುಹೋಗುತ್ತಿದ್ದರು. ಆಗ ದೂರದಲ್ಲಿ ಸುಮಾರು ಎಂಟು ವರ್ಷಗಳ ಎರಡು ಮಕ್ಕಳು ಅವರತ್ತ ಓಡಿಬರುತ್ತಿದ್ದವು.

"ಓಡಿಬರುತ್ತಿರುವವರು ರಾಮು ಮತ್ತು ರಾಣಿ. ದಿನಕ್ಕೆ ಒಂದಾದರೂ ಒಳ್ಳೆಯ ಕೆಲಸ ಮಾಡಬೇಕೆಂಬುದು ಈ ಇಬ್ಬರು ಮಕ್ಕಳ ಪ್ರತಿಜ್ಞೆ" ಅಂದಳು ರೇಖ.

"ಹಾಗಂದರೆ" ನವೀನ್ ಕೇಳಿದ.

"ನೀನು ಸ್ಕೌಟ್ ಅಲ್ಲವೇ?" ಚಿಕ್ಕಪ್ಪ ಆಶ್ಚರ್ಯದಿಂದ ಕೇಳಿದರು.

"ಇಲ್ಲ ನಾನು ಇನ್ನೂ ಸ್ಕೌಟ್......ಆಗಿಲ್ಲ" ಎಂದು ನವೀನ್ ತೊದಲುತ್ತಾ ನುಡಿದ.

"ರಾಮು ಕಬ್ ಆಗಿದ್ದಾನೆ. ಅವನ ಅವಳಿ ಸೋದರಿ ರಾಣಿ ಬುಲ್‌ಬುಲ್. ದಿನಕ್ಕೆ ಒಮ್ಮೆಯಾದರೂ ಒಳ್ಳೆಯ ಕೆಲಸ ಮಾಡುವುದು ಕಬ್ ಮತ್ತು ಬುಲ್‌ಬುಲ್‌ರ ಧ್ಯೇಯ. ಆದ್ದರಿಂದ ಅವರಿಬ್ಬರು ಯಾವಾಗಲೂ ಮತ್ತೊಬ್ಬರಿಗೆ ನೆರವಾಗಲು ಹಾತೊರೆದು ಕಾದಿರುತ್ತಾರೆ. ಅವರ ತಂದೆ ಶ್ರೀ ರಾವ್ ಅವರು ತಾರ ರೈಲು ನಿಲ್ದಾಣದಲ್ಲಿ ಮೇಲಧಿಕಾರಿ" ಎಂದು ರೇಖ ತಿಳಿಸಿದಳು.

ಅಷ್ಟರಲ್ಲಿ ಇಬ್ಬರು ಮಕ್ಕಳು ಓಡಿ ಬಂದು ಗುಂಪನ್ನು ಸೇರಿದರು. "ವಿಜಯ ಮಾಮ ನಾನು ನಿಮಗೆ ಸಹಾಯ ಮಾಡುತ್ತೇನೆ! ಈ ಗಂಟನ್ನು ನಾನು ಒಯ್ಯುತ್ತೇನೆ. · ರೇಖಕ್ಕ ಈ ಪೆಟ್ಟಿಗೆಯನ್ನು ನಾನು ಹಿಡಿದುಕೊಳ್ಳುತ್ತೇನೆ" ಎಂದು ಆ ಮಕ್ಕಳು ಏದುಸಿರು ಬಿಡುತ್ತಾ ಸಹಾಯಕ್ಕೆ ಬಂದವು.

"ರಾಮು, ಇದೇನಾ ನಡೆದುಕೊಳ್ಳುವ ರೀತಿ. ಕಪಿಲಣ್ಣನಿಗೆ ಮೊದಲು ನಮಸ್ಕಾರ ಹೇಳು. ಇವನು ಕಪಿಲಣ್ಣನ ಸ್ನೇಹಿತ ನವೀನ್" ಎಂದು ವಿಜಯ ಚಿಕ್ಕಪ್ಪ ಹೇಳಿದರು.

ಆಗ ಮಕ್ಕಳು ಮುಗುಳ್ನಕ್ಕು, "ನಾವು ನಿಮಗೆ ಸಹಾಯ ಮಾಡಬಹುದೇ?" ಎಂದು ಹುಡುಗರನ್ನು ಕೇಳಿದರು.

"ಅಗತ್ಯವಾಗಿ" ಎಂದ ಕಪೀಲ್. "ನೀವಿಬ್ಬರೂ ಈ ಚೀಲವನ್ನು ಹಿಡಿದುಕೊಂಡು ಹೋಗಿ. ಆದರೆ ಜಾಗ್ರತೆ, ಬೀಳಿಸಬಾರದು" ಎಂದು ತಿಳಿಸಿದ.

ಎಲ್ಲರೂ ಅಲ್ಲಿಂದ ಮುಂದೆ ನಡೆದರು.

"ನೋಡಿ. ಇದೇ ತಾರ-ತೋಟ. ಎಲ್ಲರೂ ಒಳಗೆ ಬನ್ನಿ" ಅಂದರು ವಿಜಯ ಚಿಕ್ಕಪ್ಪ.

ವಿಜಯ ಚಿಕ್ಕಪ್ಪ ಕೆಂಪು ಬಣ್ಣದ ಗೇಟ್ ತೆಗೆದರು. ಕಲ್ಲು ಹಾಸಿದ ಕಾಲುದಾರಿಯಲ್ಲಿ ಸ್ವಲ್ಪ ದೂರ ನಡೆದು ತೋಟದ ಮನೆಯನ್ನು ತಲುಪಿದರು. ಇಳುಕಲು ಛಾವಣಿಯ ಆ ಮನೆ ಚಿಕ್ಕ ಕುಟೀರದ ಹಾಗಿತ್ತು. "ಈ ಮನೆ ಎಷ್ಟು ಮುದ್ದಾಗಿದೆ" ಅಂದ ನವೀನ್ ಸೋಜಿಗದಿಂದ.

"ಅಲ್ಲಿ ನೋಡು, ಆ ತ್ರಿಕೋಣಾಕೃತಿಯ ಕಿಟಕಿಯ ಮೇಲೆ ಕಾಣುತ್ತಿದೆಯಲ್ಲಾ, ಅದೇ ನಾವಿಬ್ಬರೂ ಇರುವ ಕೊಠಡಿ" ಎಂದು ಕೈತೋರಿಸಿ ಹೇಳಿದ ಕಪಿಲ್.

ಅವಳಿ ಮಕ್ಕಳು ಪ್ರಯಾಸದಿಂದ, ಮೇಲುಸಿರು ಬಿಡುತ್ತಾ, ಎಲ್ಲ ಸಾಮಾನುಗಳನ್ನು ಕೊಠಡಿಯೊಳಕ್ಕೆ ಸಾಗಿಸಿದರು. ಒಳ್ಳೆಯ ಕೆಲಸ ಮಾಡುವುದಾಗಿ ಏಕಾದರೂ ಪ್ರತಿಜ್ಞೆ ಮಾಡಿದವೋ ಅಂದುಕೊಳ್ಳುವಂತಾಗಿತ್ತು ಆ ಮಕ್ಕಳ ಪರಿಸ್ಥಿತಿ.





## ಜಾಣ ಕೆಲಸಗಾರ

ಆ ಮಕ್ಕಳಿಗೆ, ಕಪಿಲ್ ಮತ್ತು ನವೀನರನ್ನು ತೋಟದಲ್ಲಿ ಎಲ್ಲ ಕಡೆ ಸುತ್ತಾಡಿಸಬೇಕೆಂಬ ಉತ್ಸಾಹ. ಆ ತೋಟ ದೊಡ್ಡದಾಗಿರದಿದ್ದರೂ ಅನೇಕ ಆಕರ್ಷಣೆಗಳಿದ್ದುವು. ಮನೆಯ ಹಿಂಭಾಗದಲ್ಲೇ ತರಕಾರಿ ತೋಟ. ಅದರ ಒಂದು ಪಕ್ಕದಲ್ಲಿ ಕೋಳಿ ಸಾಕುವ ಜಾಗ. ಈ ಜಾಗದ ಸುತ್ತ ತಂತಿ ಬಲೆಯನ್ನು ಹಾಕಿದ್ದರು. ತಂತಿ ಬಲೆಗೆ ಮರದ ಚೌಕಟ್ಟುಗಳು. ಅದರ ಒಳಗೆ ಪೆಟ್ಟಿಗೆಯನ್ನು ಹೋಲುವ ಕೋಳಿ ಮನೆಗಳಿದ್ದವು. ನೆಲದ ಮೇಲೆ ಒಂದು ಪದರದಷ್ಟು ಮರದ ಹೊಟ್ಟನ್ನು ಚೆನ್ನಾಗಿ ಹರಡಲಾಗಿತ್ತು.

"ಕೋಳಿಮೊಟ್ಟೆಗಳನ್ನು ಆರಿಸಿ ತೆಗೆದಿಡಲು ನಾವು ಸಹಾಯ ಮಾಡುತ್ತೇವೆ" ಎಂದು ಆ ಮಕ್ಕಳು ಹೆಮ್ಮೆಯಿಂದ ಹೇಳಿಕೊಂಡವು.

ರೇಖ ತಂತಿ ಬಲೆಯ ಬಾಗಿಲನ್ನು ತೆಗೆಯುತ್ತಾ, "ಈ ಬಾಗಿಲು ಅಲ್ಲಾಡುತ್ತಿದೆ. ಇದನ್ನು ಅಪ್ಪನಿಗೆ ಹೇಳಿದ್ದೆ. ಕೆಲಸದ ಗಡಿಬಿಡಿಯಲ್ಲಿ ಅದನ್ನು ಸರಿ ಮಾಡಿಸಲು ಅವರು ಮರೆತಿರಬೇಕು" ಅಂದಳು.

ಕಪಿಲ್ ಬಾಗಿಲನ್ನು ಪರೀಕ್ಷಿಸಿದ. "ಇಷ್ಟು ಚಿಕ್ಕ ಕೆಲಸಕ್ಕಾಗಿ ನಿಮ್ಮ ತಂದೆಗೆ ತೊಂದರೆ ಕೊಡಬೇಡ. ಇದನ್ನು ನಾನೇ ಸುಲಭವಾಗಿ ಜೋಡಿಸಬಲ್ಲೆ. ನನ್ನ ಬಳಿ ಉಪಕರಣಗಳಿವೆ. ನನಗೆ ಬೇಕಾಗಿರುವುದು ಕೆಲವು ಹೊಸ ಸ್ಕ್ರೂ ಮೊಳೆಗಳು ಮಾತ್ರ" ಅಂದ ಕಪಿಲ್.

ನವೀನ್ ತನ್ನ ಸ್ನೇಹಿತನ ಕಡೆ ಮೆಚ್ಚುಗೆಯ ನೋಟ ಬೀರಿದ. ಕಪಿಲ್‌ಗೆ ಬರದೇ ಇರುವ ಕೆಲಸವೇ ಇಲ್ಲ. ಸ್ಕೌಟ್ ತರಪೇತಿಯಲ್ಲಿ ಮರಗೆಲಸವನ್ನೂ ಕಲಿತಿರಬೇಕೆಂದು ಕೊಂಡ ನವೀನ್.

ಕೊಟ್ಟಿಗೆಯ ಬಳಿ ಬಂದಾಗ, ಖಾಲಿ ಕೊಟ್ಟಿಗೆಯನ್ನು ನೋಡಿ, "ಹಸು ಎಲ್ಲಿ?" ಎಂದು ವಿಚಾರಿಸಿದ ಕಪಿಲ್.

"ಪಾಪ, ಕಳೆದ ಚಳಿಗಾಲದಲ್ಲಿ ಅದು ಸತ್ತುಹೋಯಿತು"ಎಂದಳು ರೇಖ. "ಆದರೆ ಜಸ್ವಂತ ಡೈರಿಯಿಂದ ನಮಗೆ ಸಮೃದ್ಧಿಯಾಗಿ ಹಾಲು ಮೊಸರು ದೊರೆಯುತ್ತದೆ".

"ಓಹೋ, ಜಸ್ವಂತ್ ಈ ಊರಿನಲ್ಲೇ ಇದ್ದಾನೊ? ಅವನೊಬ್ಬ ಒಳ್ಳೆಯ ಸ್ಕೌಟ್. ಒಂದೆರಡು ರಾತ್ರಿ ಅವನು ನನ್ನನ್ನು ಮತ್ತು ನವೀನನನ್ನು ಕ್ಯಾಂಪಿಗೆ ಕರೆದುಕೊಂಡು ಹೋದರೆ ಚೆನ್ನಾಗಿರುತ್ತದೆ" ಎಂದ ಕಪಿಲ್.

"ಅವನು ಖಂಡಿತ ನಿಮ್ಮನ್ನು ಕ್ಯಾಂಪಿಗೆ ಕರೆದುಕೊಂಡು ಹೋಗುತ್ತಾನೆ. ಈಗ ಮೊದಲು ಒಳಗೆ ಹೋಗಿ ಏನನ್ನಾದರೂ ತಿನ್ನೋಣ ಬನ್ನಿ" ಎಂದು ರೇಖ ಅವರನ್ನು ಅಡಿಗೆ ಮನೆಯತ್ತ ಕರೆದೊಯ್ದಳು.

ಅಡಿಗೆ ಮನೆಯಲ್ಲಿ ಒಲೆಯ ಎದುರಿಗೆ ಒಂದು ಚಿಕ್ಕ ಮೇಜು. ಎದುರು ಬದಿಯ ಗೋಡೆಗೆ ಮರದ ಹಲಗೆಯನ್ನು ಹೊಡೆದು ಸಾಮಾನುಗಳನ್ನಿಡಲು ಅಚ್ಚುಕಟ್ಟಾದ ಏರ್ಪಾಟು ಮಾಡಲಾಗಿತ್ತು.

ರೇಖಳ ತಾಯಿ ತಟ್ಟೆಯಲ್ಲಿ ಊಟವನ್ನು ಬಡಿಸಿದರು. ಪ್ರತಿಯೊಬ್ಬರು ತಮ್ಮ ತಮ್ಮ ತಟ್ಟೆಯಲ್ಲಿ ಊಟವನ್ನು ಮತ್ತು ಲೋಟದಲ್ಲಿ ಮಜ್ಜಿಗೆಯನ್ನು ತೆಗೆದುಕೊಂಡು ಟೇಬಲ್‌ನ ಬಳಿ ಹೋದರು. ಪುಷ್ಕಳವಾಗಿ ಉಂಡ ಬಳಿಕ ಪ್ರತಿಯೊಬ್ಬರು ತಮ್ಮ ತಟ್ಟೆ ಮತ್ತು ಲೋಟ ವನ್ನು ನಲ್ಲಿಯ ಬಳಿ ಒಯ್ದರು. ಒಬ್ಬರಾದ ಮೇಲೊಬ್ಬರಂತೆ ಅವುಗಳನ್ನು ಚೆನ್ನಾಗಿ ತೊಳೆದರು. ಎರಡು ದೊಡ್ಡ ಪಾತ್ರೆಗಳನ್ನು ತೊಳೆಯುವುದನ್ನು ಬಿಟ್ಟರೆ, ಅವರು ರೇಖನ ತಾಯಿಗೆ ಯಾವ ಕೆಲಸವನ್ನೂ ಉಳಿಸಲಿಲ್ಲ. ಇದನ್ನೆಲ್ಲ ನೋಡಿ ನವೀನ್‌ಗೆ ಆಶ್ಚರ್ಯ. ಅವನು ಮನೆಯಲ್ಲಿ ತನ್ನ ತಟ್ಟೆಯನ್ನು ಎಂದೂ ತೊಳೆದವನಲ್ಲ. ಕಪಿಲ್ ತಟ್ಟೆ ತೊಳೆಯು



ವುದನ್ನು ನವೀನ್ ಗಮನವಿಟ್ಟು ನೋಡುತ್ತಿದ್ದ. ತಾನೂ ಅದೇ ರೀತಿ ತಟ್ಟೆಯನ್ನು ತೊಳೆದ. ಅನಂತರ ಬಟ್ಟೆಯಿಂದ ತಟ್ಟೆಯನ್ನು ಚೆನ್ನಾಗಿ ಒರೆಸಿದ. ಕಪಿಲ್ ಮತ್ತು ರೇಖ ಮಾಡಿದ ಹಾಗೆ ತಾನೂ ತಟ್ಟೆಯನ್ನು ಅದರಲ್ಲಿ ಬೋರಲು ಹಾಕಿದ.

ಕಪಿಲ್ ತನ್ನನ್ನು ಗಮನಿಸುತ್ತಿರುವನೇ ಎಂಬುದನ್ನು ಮುಖ ಎತ್ತಿ ನೋಡಿದ. “ನಾನು ಈ ಕೆಲಸವನ್ನು ಬೇಗನೆ ಕಲಿಯುತ್ತೇನೆ” ಅಂದ ನವೀನ್.

“ಹೌದು, ನೀನು ಕಲಿಯುತ್ತೀಯೆ” ಎಂದು ಹೇಳುತ್ತಾ ಕಪಿಲ್ ಪ್ರೀತಿಯಿಂದ ತನ್ನ ಸ್ನೇಹಿತನ ಭುಜದ ಮೇಲೆ ಕೈಹಾಕಿದ. “ಬಾ, ನಾವು ಸಾಮಾನುಗಳನ್ನು ಹೊರ ತೆಗೆದು, ಕೋಳಿಮನೆಯ ಬಾಗಿಲನ್ನು ಸರಿ ಮಾಡೋಣ” ಅಂದ ಕಪಿಲ್.

# ಸ್ಕೌಟ್ ಕ್ಯಾಂಪ್

"ಇಂದೇ ನೀವು ಇಲ್ಲಿಗೆ ಬಂದಿದ್ದೀರಿ. ಹೆಚ್ಚಿಗೆ ಓಡಾಟ ಬೇಡ. ಆರಾಮವಾಗಿರಿ. ಬೇಕಾದರೆ ಸಂಜೆ ಸ್ಕೌಟ್ ಕ್ಯಾಂಪ್ ವರೆಗೆ ಹೋಗಿ ಬರೋಣ. ಈಗ ಅಲ್ಲಿ ಹುಡುಗರಿಲ್ಲ. ಸ್ಕೌಟ್ ಶಿಕ್ಷಕರಿಗೆ ತರಪೇತಿ ನಡೆಯುತ್ತಿದೆ. ಚಿಂತೆ ಇಲ್ಲ. ನವೀನ್‌ಗೆ ಆ ಸ್ಥಳವನ್ನು ತೋರಿಸ ಬಹುದು" ಅಂದರು ವಿಜಯ ಚಿಕ್ಕಪ್ಪ.

ಹುಡುಗರು, ರೇಖ ಮತ್ತು ವಿಜಯ ಚಿಕ್ಕಪ್ಪ ದಟ್ಟವಾದ ಕಾಡಿನ ಮಧ್ಯೆ, ಕಾಲುದಾರಿ ಯಲ್ಲಿ ನಡೆದು ಹೋದರು. ಕಾಡು ದಾಟಿ ಅವರು ಬಟ್ಟಬಯಲಿಗೆ ಬಂದರು. ಮಟ್ಟಸವಾದ ಈ ವಿಶಾಲ ಬಯಲನ್ನು ಕಂಡು ನವೀನ್ ಅಚ್ಚರಿಗೊಂಡ. ಅದು ಒಳ್ಳೆಯ ಪೆರೇಡ್ ಮೈದಾನ ಇದ್ದ ಹಾಗಿತ್ತು. ಬಯಲಿನ ಒಂದು ತುದಿಯಲ್ಲಿ ಕೆಲವು ಮರದ ಮನೆಗಳಿದ್ದವು.

"ನವೀನ್, ಇದೇ ಜಾಗದಲ್ಲಿ ನಮ್ಮ ಸ್ಕೌಟ್ ಕ್ಯಾಂಪ್ ನಡೆದದ್ದು" ಅಂದ ಕಪಿಲ್. 'ಬಾ, ನಮ್ಮ ಊಟದ ಮನೆ ಮತ್ತಿತರ ಕೋಣೆಗಳನ್ನು ತೋರಿಸುತ್ತೇನೆ" ಎಂದು ಅವನು ನವೀನನನ್ನು ಕರೆದೊಯ್ದ.



ಇವುಗಳಲ್ಲಿ ಒಂದು ಮನೆಯಲ್ಲಿ ಬಣ್ಣಬಣ್ಣದ ಮೇಜುಗಳು ಮತ್ತು ಸ್ಟೂಲ್‌ಗಳಿದ್ದವು. ಅವುಗಳಿಗೆ ಹಳದಿ, ಕೆಂಪು, ಹಸಿರು ಅಥವಾ ನೀಲಿ ಬಣ್ಣಗಳನ್ನು ಬಳಿಯಲಾಗಿತ್ತು. ಮಲಗುವ ಕೋಣೆಯಲ್ಲಿ, ರೈಲು ಡಬ್ಬಿಯಲ್ಲಿರುವಂತೆ, ಗೋಡೆಗೆ ಸೇರಿಸಿದ ಹಾಗೆ ಒಂದರ ಕೆಳಗೆ ಒಂದು ಮೂರು ಹಲಗೆಗಳನ್ನು ಜೋಡಿಸಿ, ಮಲಗಲು ಅಚ್ಚುಕಟ್ಟು ವ್ಯವಸ್ಥೆ ಮಾಡಲಾಗಿತ್ತು. ಇವೆಲ್ಲವೂ ನವೀನ್‌ಗೆ ಆಶ್ಚರ್ಯಕರವಾಗಿದ್ದುವು.

"ಎಲ್ಲರೂ ಒಟ್ಟಿಗೆ ಇರುವುದು ಬಹಳ ಆನಂದ ದಾಯಕ, ಅಲ್ಲವೇ ಕಪಿಲ್?" ಎಂದು ನವೀನ್ ಕೇಳಿದ.

"ಹೌದು, ಇಲ್ಲಿ ನನಗೆ ಕಾಲ ಕಳೆದದ್ದೇ ಗೊತ್ತಾಗ ಲಿಲ್ಲ. ಅಷ್ಟೊಂದು ಮಜವಾಗಿತ್ತು. ಭಾರತದ ಎಲ್ಲ ಭಾಗಗಳಿಂದ ಇಲ್ಲಿಗೆ ಬಂದಿದ್ದ ಅನೇಕ ಹುಡುಗರ ಪರಿಚಯ ನನಗಾಯಿತು" ಎಂದು ಕಪಿಲ್ ಹೇಳಿದ.

ಅಷ್ಟರಲ್ಲಿ ಎರಡು ಗುಂಡುಮುಖಗಳು ಕೋಣೆಯ ಬಾಗಿಲಿನಿಂದ ಇಣುಕು ಹಾಕಿದುವು.

"ಓ, ನೀವಿಬ್ಬರೂ ಇಲ್ಲಿಗೆ ಹೇಗೆ ಬಂದಿರಿ?" ಎಂದು ಕಪಿಲ್ ಕೇಳಿದ.

"ನವೀನ್‌ಗೆ ಪೌವ್-ವವ್ ಚೌಕವನ್ನು ತೋರಿಸ ಬೇಕು" ಅಂದ ರಾಮು.

"ಚೌವ್-ಚೌವ್ ಚೌಕವೇ ? ಹಾಗಂದರೇನು?" ನವೀನ್ ಕೇಳಿದ.

"ಚೌವ್-ಚೌವ್ ಅಲ್ಲ, ಪೌವ್-ವವ್" ಎಂದು ಮಕ್ಕಳು ಅವನ ಉಚ್ಚಾರವನ್ನು ಸರಿಪಡಿಸಿದವು.

ಮಕ್ಕಳ ಮಾತನ್ನು ಕೇಳಿ ಚಿಕ್ಕಪ್ಪನಿಗೆ ನಗು. "ಪೌವ್-ವವ್ ಚೌಕದಲ್ಲಿ ಕಬ್‌ಗಳ ಕೂಟ ನಡೆಯು ತ್ತದೆ. ಇಲ್ಲಿಂದ ಆ ಸ್ಥಳ ಐನೂರು ಗಜಗಳಷ್ಟು ಮುಂದಿದೆ" ಅಂದರು ವಿಜಯ ಚಿಕ್ಕಪ್ಪ.

"ರಾಮು ನನ್ನನ್ನು ಖಂಡಿತ ಪೌವ್-ವವ್ ಚೌಕಕ್ಕೆ ಕರೆದುಕೊಂಡು ಹೋಗು" ಎಂದು ನವೀನ್ ಹೇಳಿದ.





ಆ ಇಬ್ಬರು ಮಕ್ಕಳು ಕುಣಿದು ಕುಪ್ಪಳಿಸುತ್ತಾ ಮುಂದೆ ನಡೆದರು. ಬೆಟ್ಟಗಳ ಮಧ್ಯ ದಲ್ಲಿದ್ದ ಒಂದು ಮೈದಾನಕ್ಕೆ ಅವರೆಲ್ಲಾ ಬಂದರು. ಮೊದಲು ನೋಡಿದ ಮೈದಾನಕ್ಕಿಂತ ಇದು ಸ್ವಲ್ಪ ಚಿಕ್ಕದು ಮತ್ತು ವೃತ್ತಾಕಾರದಲ್ಲಿತ್ತು.

"ಇದೊಂದು ಚಿಕ್ಕ ಬಯಲು ರಂಗಮಂಟಪದ ಹಾಗೆ ಕಾಣುತ್ತದೆ" ಅಂದ ನವೀನ್.

"ಒಂದು ರೀತಿಯಲ್ಲಿ ಇದೊಂದು ರಂಗಮಂಟಪವೇ. ಕ್ಯಾಂಪಿನ ಕಡೇ ದಿನ, ಮಕ್ಕಳು ಅನೇಕ ಕಾರ್ಯಕ್ರಮಗಳನ್ನು ಇಲ್ಲಿ ನಡೆಸುತ್ತಾರೆ. ಜಾನಪದ ನೃತ್ಯ, ಕಿರು ನಾಟಕ, ಹಾಡು ಗಾರಿಕೆ ಮುಂತಾದ ಅನೇಕ ಕಾರ್ಯಕ್ರಮಗಳನ್ನು ಅವರು ಪ್ರದರ್ಶಿಸುವರು" ಅಂದರು ವಿಜಯ ಚಿಕ್ಕಪ್ಪ.

"ಅಖೇಲಾ ಕೂಡ ಇಲ್ಲಿ ಪೌವ್–ವವ್ ಸಭೆಯನ್ನು ನಡೆಸುತ್ತಾನೆ" ಅಂದ ರಾಮು, ಹೇಳಲು ಮರೆತ ಮುಖ್ಯವಾದ ಸಮಾಚಾರವನ್ನು ಜ್ಞಾಪಿಸಿಕೊಟ್ಟವನ ಹಾಗೆ.



ಹೊಸ ವಿಷಯಗಳನ್ನು ಕಲಿಯಲು ಸದಾ ಇಷ್ಟಪಡುವ ನವೀನ್, "ಅಖೇಲಾ ಅಂದರೆ ಯಾರು?" ಎಂದು ಕೇಳಿದ.

"ಅಂದ ಹಾಗೆ ಚಿಕ್ಕಪ್ಪ, ಈಗ ನೆನಪಾಯಿತು. ನವೀನನಿಗೆ 'ಜಂಗಲ್ ಬುಕ್'ಅನ್ನು ಓದಲು ಕೊಡುತ್ತೀರಾ? ಇಲ್ಲದಿದ್ದರೆ ಅವನ ಪ್ರಶ್ನೆಗಳಿಗೆ ಕೊನೆ–ಮೊದಲಿರುವುದಿಲ್ಲ" ಅಂದ ಕಪಿಲ್

"ಖಂಡಿತ ಕೊಡುತ್ತೇನೆ. ಅವನು ಆ ಪುಸ್ತಕವನ್ನು ಓದಲೇ ಬೇಕು. ಕಬ್ ಕೂಟವೊಂದರ ನಾಯಕನನ್ನು ಅಖೇಲಾ ಅನ್ನುತ್ತಾರೆ. ನೀನು ಓದಲಿರುವ 'ಜಂಗಲ್ ಬುಕ್'ನಲ್ಲಿ ಒಂದು ತೋಳದ ವಿಷಯ ಬರುತ್ತದೆ. ತೋಳಗಳ ತಂಡದ ನಾಯಕನಿಗೂ ಅಖೇಲಾ ಎಂದೇ ಹೆಸರು" ಅಂದರು ಚಿಕ್ಕಪ್ಪ.

ಬೆಟ್ಟದ ಹಿಂಬದಿಯಲ್ಲಿ ಸೂರ್ಯ ಮುಳುಗತೊಡಗಿದ. ಹೊಂಬಣ್ಣದ ಮೋಡಗಳು ಕೆಂಪಾದವು. ಕ್ರಮೇಣ ಸೂರ್ಯ ಕಣ್ಮರೆಯಾದ. ಇಂತಹ ಅಮೋಘವಾದ ದೃಶ್ಯವನ್ನು ನವೀನ್ ಹಿಂದೆಂದೂ ನೋಡಿರಲಿಲ್ಲ.

"ಇದೊಂದು ಅದ್ಭುತವಾದ ಸ್ಥಳ" ಎಂದ ನವೀನ್.

"ಈ ಇಡೀ ಪ್ರದೇಶವನ್ನು ಒಬ್ಬ ವ್ಯಕ್ತಿ 'ಬಾಯ್ ಸ್ಕೌಟ್ಸ್ ಅಸೋಸಿಯೇಷನ್'ಗೆ ಬಳುವಳಿಯಾಗಿ ಕೊಟ್ಟ. ಅನೇಕ ವರ್ಷಗಳ ಹಿಂದೆ ಆ ವ್ಯಕ್ತಿ ನಿವೃತ್ತನಾಗಿ ಭಾರತವನ್ನು ಬಿಟ್ಟು ಹೋದ. ಮುಂಚೆ ಕೆಲವು ಭಾರತೀಯ ನಾಯಕರು ಸಂಪೂರ್ಣವಾಗಿ ಭಾರತೀಯ ಸ್ಕೌಟ್ ಚಳವಳಿಯನ್ನಾರಂಭಿಸಿದರು. ಅದಕ್ಕೆ 'ಹಿಂದುಸ್ಥಾನ್ ಸ್ಕೌಟ್ಸ್' ಎಂದು ಹೆಸರಾಯಿತು. 1947ರಲ್ಲಿ ದೇಶಕ್ಕೆ ಸ್ವಾತಂತ್ರ್ಯ ಬಂದ ಬಳಿಕ, ಎರಡು ಗುಂಪುಗಳೂ ಒಂದಾಗಿ, 'ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್' ವ್ಯವಸ್ಥೆ ರಚಿತವಾಯಿತು." ಇಷ್ಟು ಹೇಳಿ, "ಇನ್ನು ಮನೆಗೆ ನಡೆಯಿರಿ" ಅಂದರು ಚಿಕ್ಕಪ್ಪ.

ಮುಸ್ಸಂಜೆಯಾಯಿತು. ಕತ್ತಲು ಆವರಿಸಿತು. "ಸಿಮ್ಲಾದ ದೀಪಗಳು ಹೇಗೆ ಮಿನುಗುತ್ತಿವೆ ನೋಡು" ಎಂದು ಕಪಿಲ್ ನವೀನ್‌ಗೆ ತೋರಿಸಿದ.

ಎದುರುಗಡೆಯ ಬೆಟ್ಟದಿಂದ ಸಹಸ್ರಾರು ದೀಪಗಳು ಮಿನುಗುತ್ತಿದ್ದ ದೃಶ್ಯ ರಮಣೀಯವಾಗಿತ್ತು.

"ಈಗ ಮೇಲೆ ನೋಡು" ಎಂದರು ಚಿಕ್ಕಪ್ಪ.

ನವೀನ್ ತಲೆ ಎತ್ತಿ ನೋಡಿದ. ಆಕಾಶ ನಕ್ಷತ್ರಮಯವಾಗಿತ್ತು.

"ನಕ್ಷತ್ರಗಳು ಎಷ್ಟು ಉಜ್ವಲವಾಗಿ ಬೆಳಗುತ್ತಿವೆ! ಇಷ್ಟು ಪ್ರಕಾಶಮಾನವಾಗಿ ಮಿನುಗುವ ನಕ್ಷತ್ರಗಳನ್ನು ಕರ್ನಾಲ್‌ನಲ್ಲಿ ನೋಡುವುದು ಕಷ್ಟ" ಅಂದ.

ನವೀನ್‌ಗೆ ಧ್ರುವ ನಕ್ಷತ್ರವನ್ನು ತೋರಿಸುವಂತೆ ಚಿಕ್ಕಪ್ಪ ಕಪೀಲ್‌ಗೆ ಹೇಳಿದರು. ಅದನ್ನು ಗುರುತಿಸುವ ವಿಧಾನವನ್ನು ಸಹ ಹೇಳಿಕೊಡುವಂತೆ ತಿಳಿಸಿದರು.

ನವೀನ್ ಸಪ್ತರ್ಷಿ ಮಂಡಲದ ಮೂಲಕ ಧ್ರುವ ನಕ್ಷತ್ರದ ದಿಕ್ಕು ಪತ್ತೆ ಹಚ್ಚುವುದನ್ನು ಕಲಿತ.

ಅಂದು ರಾತ್ರಿ ಮಲಗುವ ಸಮಯದಲ್ಲಿ "ಇಲ್ಲಿಗೆ ಬಂದಿರುವುದು ನನಗೆ ಬಹಳ ಸಂತೋಷವಾಗಿದೆ" ಅಂದ ನವೀನ್.

"ನಿನ್ನ ಸಂತೋಷವೇ ನನ್ನ ಸಂತೋಷ. ಈಗ ನೀನು ನಿದ್ದೆ ಮಾಡುವುದು ಒಳ್ಳೆಯದು. ಬೆಳಗ್ಗೆ ಎದ್ದ ಕೂಡಲೇ ಕೋಳಿಮನೆಯನ್ನು ಸ್ವಚ್ಛ ಮಾಡಲು ಸಹಾಯ ಮಾಡುತ್ತೇನೆ ಎಂದು ಚಿಕ್ಕಮ್ಮನಿಗೆ ಹೇಳಿದ್ದೇನೆ" ಎಂದನು ಕಪೀಲ್.

# ಹರಿಕಾರ

"ಟಪ್, ಟಪ್."

ನವೀನ್‌ಗೆ ಎಚ್ಚರವಾಯಿತು.

"ಟಪ್, ಟಪ್, ಟಪ್."

ಯಾರೋ ಬಾಗಿಲು ಬಡಿಯುತ್ತಿರಬೇಕೆಂದು ನವೀನ್‌ನ ಭಾವನೆ.

ನವೀನ್ ತನ್ನ ಸ್ನೇಹಿತನ ಹಾಸಿಗೆಯತ್ತ ತಿರುಗಿದ. ಆದರೆ ಅವನು ಆ ವೇಳೆಗಾಗಲೇ ಹಾಸಿಗೆಯಿಂದ ಎದ್ದಿದ್ದ. ಹೊದಿಕೆಗಳನ್ನು ಅಚ್ಚುಕಟ್ಟಾಗಿ ಮಡಚಿ ಇಟ್ಟಿದ್ದ. ಅದನ್ನು ಕಂಡು ನವೀನ್ ಸಹ ಜಗ್ಗನೆ ಹಾಸಿಗೆಯಿಂದ ಎದ್ದ. ಅದೇ ರೀತಿ ತಾನು ಹೊದಿಕೆಗಳನ್ನು ಮಡಚಿಟ್ಟ.

ಕಪಿಲ್ ಬಟ್ಟೆಗಳನ್ನು ಧರಿಸಿಕೊಂಡು ಸಿದ್ಧನಾಗಿ ಬಂದ. ನವೀನ್ ಚೆನ್ನಾಗಿ ನಿದ್ದೆ ಬಂತೇ?" ಎಂದು ವಿಚಾರಿಸಿದ.

"ಟಪ್, ಟಪ್, ಟಪ್, ಟಪ್."

"ಯಾರೋ ಬಾಗಿಲು ತಟ್ಟುತ್ತಿರುವ ಹಾಗಿದೆ" ಅಂದ ನವೀನ್

"ಮರಕುಟಿಗ ಇರಬೇಕು. ಮನೆಯ ಹಿಂದಿರುವ ಓಕ್ ಮರದ ಮೇಲೆ ಅದರ ವಾಸ. ನೀನು ಬೇಗನೆ ಸಿದ್ಧನಾಗು, ಕೋಳಿಮನೆಗೆ ಹೋಗುವಾಗ ಆ ಹಕ್ಕಿಯನ್ನು ನೋಡಿಕೊಂಡು ಹೋಗೋಣ."

ಕೆಲವೇ ನಿಮಿಷಗಳಲ್ಲಿ ಇಬ್ಬರು ಹುಡುಗರು ಓಕ್ ಮರದ ಕೆಳಗೆ ನಿಂತರು. "ಮರ ಕುಟಿಗ ಎಲ್ಲಿ?" ನವೀನ್ ಕೇಳಿದ.

"ಹುಷ್, ಗಲಾಟೆ ಮಾಡಬೇಡ. ಶಬ್ದವಾದರೆ ಅದು ಅಲ್ಲಿಂದ ಹಾರಿ ಹೋಗುತ್ತದೆ" ಕಪಿಲ್ ಎಚ್ಚರಿಸಿದ.

"ಟಪ್, ಟಪ್, ಟಪ್."

"ನೋಡು ಅಲ್ಲೇ ಕುಳಿತಿದೆ" ಎಂದು ಕಪಿಲ್ ನವೀನ್‌ನ ಕಿವಿಯಲ್ಲಿ ಉಸುರಿದ. ನವೀನ್ ಎವೆ ಇಕ್ಕದೇ ಹಕ್ಕಿಯನ್ನು ನೋಡುತ್ತಾ ನಿಂತ. "ಟಪ್ ಟಪ್" ಮರಕುಟಿಗ ಶಬ್ದ ಮಾಡುತ್ತಲೇ ಇತ್ತು. ಅದರ ಮೈಮೇಲೆ ಕಪ್ಪು–ಬಿಳುಪಿನ ಮಚ್ಚೆಗಳು, ತಲೆಯ ಮೇಲೆ ಅಚ್ಚ ಕೆಂಪು, ಚೂಪಾದ ಕೊಕ್ಕು. ಮರದ ರೆಂಬೆಯ ಮೇಲೆ ನೆಗೆ–ನೆಗೆಯುತ್ತಾ ಕೊಕ್ಕಿನಿಂದ ಬಲವಾಗಿ ಕುಟುಕುತ್ತಿತ್ತು. "ಅದು ಏನು ಮಾಡುತ್ತಿದೆ?" ನವೀನನ ಪ್ರಶ್ನೆ.

"ಮರದ ಕೊಂಬೆಯ ಒಳಗೆ ಜೀವಿಸುವ ಹುಳುಗಳಿಗಾಗಿ ಅದು ಹುಡುಕುತ್ತಿದೆ" ಅಂದ ಕಪಿಲ್.

ಈ ಪುಟ್ಟ ಹಕ್ಕಿ ನವೀನ್‌ಗೆ ತುಂಬ ತಮಾಷೆಯಾಗಿ ಕಂಡಿತು. ಅದು ಕೊಂಬೆಯ ಮೇಲ್ತುದಿಯ ವರೆಗೆ ನೆಗೆ–ನೆಗೆದು ಹೋಗುವುದನ್ನು ಕಂಡು ಅವನಿಗೆ ಆಶ್ಚರ್ಯ. "ಆ ರೀತಿ ಹೋಗಲು ಹಕ್ಕಿಗೆ ಹೇಗೆ ಸಾಧ್ಯ?" ಎಂದು ಕೇಳಿದ.

"ಈ ಹಕ್ಕಿಗೆ ಗಿಡ್ಡಗೆ ಮತ್ತು ದಪ್ಪಗಿರುವ ತೋಕೆ ಇದೆ. ಅದರ ಆಧಾರದ ಮೇಲೆ ಅದು ಮುಂದು ಮುಂದು ಹೋಗುತ್ತದೆ" ಎಂದು ಕಪಿಲ್ ಹೇಳಿದ. ಬಳಿಕ ಇಬ್ಬರೂ ಕೊಟ್ಟಿಗೆಯತ್ತ ಹೊರಟರು.

ಕಪಿಲ್ ದನದ ಕೊಟ್ಟಿಗೆಯಿಂದ ಒಂದು ಕೈಬಂಡಿಯನ್ನು ಮತ್ತು ಉದ್ದನೆಯ ಹಿಡಿಯುಳ್ಳ ಪೊರಕೆಯನ್ನು ತಂದ. ಕೈಬಂಡಿಯನ್ನು ಹಿಡಿದುಕೊಳ್ಳುವಂತೆ ನವೀನ್‌ಗೆ ಹೇಳಿದ. "ನಾನು ಇಲ್ಲಿರುವ ಹೊಟ್ಟನ್ನೆಲ್ಲಾ ತೆಗೆದುಹಾಕುತ್ತೇನೆ. ಅದನ್ನು ಕೈಬಂಡಿಯಲ್ಲಿ ತೆಗೆದುಕೊಂಡುಹೋಗಿ, ತೋಟದ ಗುಂಡಿಯಲ್ಲಿ ಸುರಿಯಬೇಕು. ನಂತರ ನೆಲದಮೇಲೆ ಬೇರೆ ಹೊಟ್ಟನ್ನು ಹರಡಬೇಕು" ಅಂದ ಕಪಿಲ್.

ಹುಡುಗರು ಕಸ ತೆಗೆಯುತ್ತಿದ್ದಂತೆ ಚಿಕ್ಕಮ್ಮ ಕೋಳಿಮರಿಗಳಿಗೆ ಕಾಳುಗಳನ್ನು ತಂದರು.

"ನೀವಿಬ್ಬರೂ ತುಂಬ ಸಹಾಯ ಮಾಡುತ್ತಿದ್ದೀರಿ" ಅಂದರು. ಕೋಳಿಮರಿಗಳಿಗೆ ಆಹಾರವನ್ನು ಹಾಕಲು ಚಿಕ್ಕಮ್ಮ ಚುಕ್‌ಚುಕ್ ಎಂದು ಕರೆದರು.

ಕಾಳುಗಳನ್ನು ಹಾಕಿದ್ದೇ ತಡ, ಕೋಳಿಗಳು ಗೂಡುಗಳಿಂದ ಹೊರ ನೆಗೆದು ದಿಕ್ಕಾಪಾಲಾಗಿ ಓಡಿಬಂದುವು. ಕಪಿಲ್ ಗಡಿಗೆಯಲ್ಲಿದ್ದ ನೀರನ್ನು ಚೆಲ್ಲಿದ. ನವೀನ್ ಗಡಿಗೆಗೆ ಹೊಸ ನೀರು ತುಂಬಿದ.

ವಿಜಯ ಚಿಕ್ಕಪ್ಪ ಕಪಿಲನನ್ನು ಕೂಗಿದರು. "ನನಗೊಂದು ಸಹಾಯ ಮಾಡುವಿಯಾ" ಎಂದು ಕೇಳಿದರು.

"ಅಗತ್ಯವಾಗಿ ಚಿಕ್ಕಪ್ಪ" ಅಂದ ಕಪಿಲ್.

"ನಾನು ಕೆಲಸದ ಮೇಲೆ ಸಿಮ್ಲಾಗೆ ಹೋಗಬೇಕಾಗಿದೆ. ಕುರಿ ಸಾಕಣೆ ಕ್ಷೇತ್ರದಲ್ಲಿ ಶ್ರೀ ವ್ಯಾಸ್ ಅವರಿಗೆ ಈ ವಾರದ ತರಕಾರಿಗಳನ್ನು ತಲಪಿಸುತ್ತೇನೆಂದು ಹೇಳಿದ್ದೆ. ನೀವಿಬ್ಬರೂ ಹೋಗಿ ಅವರಿಗೆ ಅದನ್ನು ಕೊಟ್ಟು ಬಂದರೆ ಬಹಳ ಉಪಕಾರವಾಗುತ್ತದೆ" ಅಂದರು ಚಿಕ್ಕಪ್ಪ.





ಚಿಕ್ಕಪ್ಪ, ಈ ಕೆಲಸವನ್ನು ಅಗತ್ಯವಾಗಿ ಮಾಡುತ್ತೇವೆ. ಹೇಗಿದ್ದರೂ ನವೀನ್‌ಗೆ ಬೆಟ್ಟ-ಗುಡ್ಡಗಳನ್ನು ತೋರಿಸಲು ಹೋಗಬೇಕಾಗಿದೆ. ಹಾಗೆಯೇ ಸ್ಕೌಟ್ ಕ್ಯಾಂಪ್‌ನಿಂದ ಒಂದೆರಡು ಮೈಲಿ ಆಚೆ ಹೋದರಾಯಿತು. ಕುರಿ ಸಾಕಣೆ ಕ್ಷೇತ್ರ ಸಿಗುತ್ತದೆ" ಮಿತ್ರನ ಕಡೆ ನೋಡುತ್ತಾ ಕಪಿಲ್ ಹೇಳಿದ.

ಕಪಿಲ್ ಬುತ್ತಿಯನ್ನು ಕಟ್ಟಿಕೊಂಡ. ಜೊತೆಗೆ ಒಂದು ಫ್ಲಾಸ್ಕ್‌ಅನ್ನು ತೆಗೆದುಕೊಂಡ. ಒಂದು ಚಿಕ್ಕ ಚಾಕುವನ್ನೂ ಮತ್ತು ಒಂದು ನೋಟ್ ಪುಸ್ತಕವನ್ನೂ ಸಹ ತನ್ನ ಬಳಿ ಇಟ್ಟು ಕೊಂಡ. ಇಬ್ಬರೂ ಕೈಯಲ್ಲಿ ಒಂದೊಂದು ತರಕಾರಿ ಚೀಲವನ್ನು ಹಿಡಿದು ಹೊರಟರು.

ಅವರು ಕುರಿ ಸಾಕಣೆ ಕ್ಷೇತ್ರವನ್ನು ತಲುಪಲು ಎರಡು ಗಂಟೆಗಳ ಕಾಲ ಹಿಡಿಯಿತು.

ಕಪಿಲ್ ದೂರದಿಂದಲೇ ತೆಳ್ಳನೆಯ ವ್ಯಕ್ತಿಯೊಬ್ಬರನ್ನು ಗುರುತಿಸಿ, "ಅವರೇ ಶ್ರೀ ವ್ಯಾಸ್ ಎಂದು ನವೀನ್‌ಗೆ ಹೇಳಿ ಅವರನ್ನು ಕೈಸನ್ನೆಯಿಂದ ಕೂಗಿದ. ಚೆನ್ನಾಗಿ ತುಪ್ಪಟ ಬೆಳೆದು ಅಲ್ಲೇ ಬಿದ್ದುಕೊಂಡಿದ್ದ ದಪ್ಪ ಕುರಿಯೊಂದನ್ನು ಅವರು ಪರೀಕ್ಷಿಸುತ್ತಿದ್ದರು.

"ನಮ್ಮ ಚಿಕ್ಕಪ್ಪ ನಿಮಗೆ ತರಕಾರಿಯನ್ನು ಕಳಿಸಿದ್ದಾರೆ" ಎಂದು ಕಪಿಲ್ ಅವರಿಗೆ ಹೇಳಿದ.

"ಧನ್ಯವಾದಗಳು. ಪಾಪ, ಈ ಪ್ರಾಣಿ ಕಾಲಿಗೆ ಗಾಯ ಮಾಡಿಕೊಂಡಿದೆ" ಎಂದರು ಶ್ರೀ ವ್ಯಾಸ್.

"ನೀವು ಬಹಳ ಕೆಲಸದಲ್ಲಿದ್ದೀರಿ. ಆದ್ದರಿಂದ ನಾವಿನ್ನು ಹೊರಡುತ್ತೇವೆ" ಅಂದ ಕಪಿಲ್, ಚೀಲಗಳನ್ನು ಒಂದು ಸ್ಟೋರ್ ರೂಮಿನೊಳಗೆ ಇಟ್ಟು ಬಂದ.

# ಕಣ್ಣು ಮುಚ್ಚಾಲೆ

ಹುಡುಗರು ನಡೆದು ಹಸಿದಿದ್ದರು. ಕಪಿಲ್ ಒಂದು ಒಳ್ಳೆಯ ಜಾಗವನ್ನು ಹುಡುಕಿದ. ಇಬ್ಬರೂ ಅಲ್ಲಿ ಕುಳಿತು ಊಟ ಮಾಡಿದರು. "ಕಣ್ಣುಮುಚ್ಚಾಲೆ ಆಡೋಣವೇ" ಎಂದು ಕಪಿಲ್ ಕೇಳಿದ.

"ಅದನ್ನು ಹೇಗೆ ಆಡುವುದು?"

"ನೀನು ಈ ಕಾಡಿನಲ್ಲಿ ಎಲ್ಲಾದರೂ ಅವಿತುಕೊ. ಐದು ನಿಮಿಷಗಳನ್ನು ಕೊಡುತ್ತೇನೆ. ನಂತರ ನೀನು ಬಿಟ್ಟುಹೋಗುವ ಗುರುತುಗಳಿಂದ ನಿನ್ನನ್ನು ನಾನು ಹುಡುಕುತ್ತೇನೆ" ಅಂದ ಕಪಿಲ್.

"ನಾನು ಯಾವ ಗುರುತನ್ನೂ ಬಿಡುವುದಿಲ್ಲ".

"ನೀನು ಹಾಗೆ ಭಾವಿಸಬಹುದು. ಆದರೆ ಒಬ್ಬ ಸ್ಕೌಟ್ ತನ್ನ ಸೂಕ್ಷ್ಮ ಬುದ್ಧಿಯಿಂದ ಸುಳಿವನ್ನು ಅರಿಯಬಲ್ಲ. ನಿನ್ನನ್ನು ಪತ್ತೆಹಚ್ಚಿದ ನಂತರ ಯಾವ ಗುರುತುಗಳಿಂದ ಪತೆಹಚ್ಚಿದೆ ಎಂಬುದನ್ನು ಹೇಳುತ್ತೇನೆ" ಎಂದ ಕಪಿಲ್.



ನವೀನ್ ಓಡಿದ. ಬೆಟ್ಟದ ಅಂಚಿನಿಂದ ಬಂಡೆಗಳು ಹೊರಬಂದಿರುವುದನ್ನು ಗಮನಿಸಿದ್ದ. ಪೊದೆಯಲ್ಲಿ ತೂರಿಕೊಂಡು ಹೋಗಿ ಅವುಗಳ ಅಡಿಯಲ್ಲಿ ಅವಿತುಕೊಂಡ.

ಕಪಿಲ್‌ಗೆ ಐದು ನಿಮಿಷ ಕಾಯುವ ತಾಳ್ಮೆಯೂ ಇರಲಿಲ್ಲ. ಅವನು ಹುಡುಕಲು ಶುರು ಮಾಡಿದ. ನವೀನನಿಗೆ ಆಶ್ಚರ್ಯವಾಗು ವಂತೆ ಕಪಿಲ್ ಪೊದೆಯ ಬಳಿ ಬಂದು ನಗುತ್ತಾ ಹೇಳಿದ: "ನಾನು ನಿನ್ನನ್ನು ಹಿಡಿದುಬಿಟ್ಟೆ."

"ಇಷ್ಟು ಬೇಗ ಹೇಗೆ ಹುಡುಕಿದೆ?" ಎಂದು ಸೋತ ನವೀನ್ ಬಚ್ಚಿಟ್ಟುಕೊಂಡಿದ್ದ ಜಾಗದಿಂದ ಹೊರಬರುತ್ತಾ ಕೇಳಿದ.

"ನೋಡು, ನೀನು ಬಿಟ್ಟುಹೋದ ಗುರುತುಗಳನ್ನು ತೋರಿಸುತ್ತೇನೆ. ಓಡುವಾಗ ನೀನು ಬರುತ್ತಿದ್ದ ಕೆಮ್ಮನ್ನು ತಡೆಹಿಡಿಯಲು ಪ್ರಯತ್ನಿಸಿದ್ದರಿಂದ ನೀನು ಓಡಿದ ದಿಕ್ಕನ್ನು ಪತ್ತೆ ಮಾಡಿದೆ. ಬಳಿಕ, ತೇವದ ನೆಲದ ಮೇಲೆ ನಿನ್ನ ಹೆಜ್ಜೆ ಗುರುತುಗಳು ಚೆನ್ನಾಗಿ ಬಿದ್ದಿವೆ. ನೀನು ಒಣಗಿದ ನೆಲದ ಮೇಲೆ ಹೆಜ್ಜೆ ಇಡಬೇಕಾಗಿತ್ತು. ಪೊದೆಯೊಳಗೆ ನುಗ್ಗುವ ಗಡಿಬಿಡಿಯಲ್ಲಿ, ಅದರ ಸಣ್ಣ ಕೊಂಬೆಗಳು ನುಲಿದುಕೊಂಡಿವೆ. ಕೆಲವು ಕಡ್ಡಿಗಳು ಮುರಿದುಬಿದ್ದಿವೆ. ಇದರಿಂದ ಒಳಗೆ ನುಗ್ಗಲು ನೀನು ಜಾಗ ಮಾಡಿಕೊಂಡ ಗುರುತು ಚೆನ್ನಾಗಿ ತಿಳಿಯುತ್ತದೆ."

"ಹೌದು. ನಾನು ಬೇಕಾದಷ್ಟು ಸುಳಿವು ನೀಡಿದ್ದೇನೆ. ಈಗ ನೀನು ಬಚ್ಚಿಟ್ಟುಕೊ. ನಾನು ನಿನ್ನನ್ನು ಎಷ್ಟರ ಮಟ್ಟಿಗೆ ಪತ್ತೆಹಚ್ಚಬಲ್ಲೆ ಎಂಬುದನ್ನು ನೋಡುತ್ತೇನೆ" ಅಂದ ನವೀನ್. ನವೀನ್ ಸ್ವಲ್ಪ ಹೊತ್ತು ಕಾದ. ಕಪಿಲ್ ಓಡಿದ ದಿಕ್ಕಿನಿಂದ ಏನಾದರೂ ಶಬ್ದ ಬರುವುದೇ ಎಂದು ಕಿವಿಗೊಟ್ಟು ಕುಳಿತ. ಗಾಳಿಯ ಸುಯ್‌ಗುಟ್ಟುವಿಕೆ ಮತ್ತು ಕಾಗೆಯ ಕರ್–ಕರ್ ಶಬ್ದ ಬಿಟ್ಟರೆ ಇನ್ನೇನು ಶಬ್ದವೂ ಬರಲಿಲ್ಲ. ಅವನು ತಬ್ಬಿಬ್ಬಾದ. ತಾನು ಹೋಗಿದ್ದ ದಿಕ್ಕಿಗೆ ಎದುರುದಿಕ್ಕಿನಲ್ಲಿ ಹೋಗಿ ಅಲ್ಲಲ್ಲಿ ಶೋಧಿಸಲಾರಂಭಿಸಿದ. ಹೆಜ್ಜೆ ಗುರುತುಗಳಿಗಾಗಿ ಹುಡುಕಿದ. ಪೊದೆಯ ಬಳಿ ಮುರಿದ ಕೊಂಬೆಗಳು ಬಿದ್ದಿವೆಯೇ ನೋಡಿದ. ಆದರೆ ಯಾವ ಸುಳಿವೂ ಸಿಗಲಿಲ್ಲ.

ಇದ್ದಕ್ಕಿದ್ದಂತೆ ಪೊದೆಯೊಳಗೆ ಏನೋ ಚಲಿಸುತ್ತಿದ್ದ ಹಾಗೆ ಕಂಡಿತು. ಹಾವು ಹರಿಯುತ್ತಿರಬಹುದೇ ಎಂದು ಶಂಕಿಸಿದ. ಸ್ವಲ್ಪ ಹೊತ್ತಿನ ಬಳಿಕ ಕ್ಷೀಣ ಧ್ವನಿಯಲ್ಲಿ ಕುಂಯ್‌ಗುಟ್ಟುವ ಧ್ವನಿ ಕೇಳಿಸಿತು.

ಮರುಕ್ಷಣವೇ ಆಟವನ್ನು ಮರೆತು ನವೀನ್, "ಕಪಿಲ್, ಕಪಿಲ್, ಕಪಿಲ್" ಎಂದು ಒಂದೇ ಸಮನೆ ಕೂಗತೊಡಗಿದ.

ಹಠಾತ್ತನೆ ಬಂದ ಕೂಗನ್ನು ಕೇಳಿ ಕಪಿಲ್‌ಗೆ ಗಾಬರಿಯಾಯಿತು. ಅವನು ಕೇವಲ ಹತ್ತೇ ಗಜಗಳ ದೂರದಲ್ಲಿ, ಪೈನ್ ಪೊದರಿನಲ್ಲಿ ಅಡಗಿ ಕುಳಿತಿದ್ದ. ಅಲ್ಲಿಂದ ಎದ್ದು ಈ ಪಟ್ಟಣದ ಗುಂಗ್ಗುವಿಗೆ ಏನಾಯಿತೋ ನೋಡಲು ಧಾವಿಸಿ ಬಂದ.

ನವೀನ್ ಎರಡು ಬಂಡೆಗಳ ಮಧ್ಯ ಬೋರಲಾಗಿ ಮಲಗಿ ಪೊದೆಯೊಳಗೆ ದಿಟ್ಟಿಸಿ ನೋಡುತ್ತಿದ್ದ.

"ನವೀನ್, ನಿನಗೆ ಏನಾಯಿತು? ಸರಿಯಾಗಿದ್ದೀಯೆ ತಾನೇ?" ಅಂದ ಕಪಿಲ್.

"ಕಪಿಲ್, ಇಲ್ಲಿ ಬಾ. ನೋಡು. ನನಗೆ ಮುಟ್ಟಲು ಹೆದರಿಕೆ. ಶಬ್ದವನ್ನು ಕೇಳು" ಅಂದ ನವೀನ್.

ಕಪಿಲ್‌ಗೆ ಕುಂಯ್–ಕುಂಯ್ ಎಂಬ ಕ್ಷೀಣ ಸ್ವರ ಕೇಳಿಸಿತು. ಮಂಡಿಗಾಲಲ್ಲಿ ಕುಳಿತು ಒಳಗೆ ನೋಡಿದ. ಪೊದೆಯೊಳಗೆ ಒಂದು ಪುಟ್ಟ ನಾಯಿಮರಿ ಇತ್ತು. ಹೆದರಿಕೆ ಮತ್ತು

ಬಳಲಿಕೆಯಿಂದ ಅದರ ಜೀವ ಅರ್ಧ ಹೋದಂತಾಗಿತ್ತು. ಅದರ ಮುಂದಿನ ಪಾದ ಬೋನಿಗೆ ಸಿಕ್ಕಿಕೊಂಡು, ಅದು ನರಳುತ್ತಾ ಬಿದ್ದಿತ್ತು.

"ಅಯ್ಯೋ ಪಾಪ. ನಾನು ಈ ಬೋನಿನಿಂದ ನಾಯಿಮರಿಯ ಕಾಲು ಬಿಡಿಸುತ್ತೇನೆ. ಮೊಲಗಳನ್ನು ಹಿಡಿಯುವ ದುರಾಸೆಯಿಂದ ಯಾರೋ ಕಟುಕರು ಈ ಬೋನನ್ನು ಇಟ್ಟಿರಬೇಕು" ಅಂದ ಕಪಿಲ್.

ನಾಯಿಮರಿ ಕ್ಷೀಣ ಧ್ವನಿಯಲ್ಲಿ ಕುಂಯ್‌ಗುಟ್ಟುತ್ತಿತ್ತು. ಇಬ್ಬರು ಹುಡುಗರೂ ಬೋನಿನ ಸಹಿತ ಅದನ್ನು ಹಳ್ಳದಿಂದ ಎತ್ತಿದರು. ಕಪಿಲ್ ಅದರ ಕಾಲನ್ನು ಬಿಡಿಸಿ, ನಾಯಿಮರಿಯನ್ನು ಕೈಗೆ ಎತ್ತಿಕೊಂಡ.

"ಪಾಪ ಇದರ ಕಾಲು ಮುರಿದಿದೆಯೋ ಏನೋ. ಇನ್ನೂ ಚಿಕ್ಕ ಮರಿ. ಗಾಯ ಬೇಗ ವಾಸಿಯಾಗುತ್ತದೆ. ಪಾಪ, ಎಷ್ಟು ದಿನಗಳಿಂದ ಈ ಮರಿ ಇಲ್ಲೇ ಬಿದ್ದಿತ್ತೊ? ಬಹಳ ಬಡಕಲಾಗಿದೆ. ಆಹಾರವಿಲ್ಲದೇ ಸೊರಗುತ್ತಿದೆ" ಅಂದ ಕಪಿಲ್.

ನವೀನ್ ಬೋನನ್ನು ಎಸೆಯುತ್ತಾ, "ಎಂತಹ ಕಟುಕರಿದ್ದಾರೆ" ಅಂದ.

"ಈ ಬೋನನ್ನು ಎಸೆಯಬೇಡ. ಈ ಬಗ್ಗೆ ನಾವು ಅಧಿಕಾರಿಗಳಿಗೆ ದೂರು ಕೊಡಬೇಕು. ನಾಯಿಮರಿಯನ್ನು ಬೇಗನೆ ಮನೆಗೆ ತೆಗೆದುಕೊಂಡು ಹೋಗುವುದು ಲೇಸು" ಎಂದ ಕಪಿಲ್



# ನಾಯಿಮರಿ ಭಾಲೂ

ಇಬ್ಬರು ಹುಡುಗರೂ ಮನೆ ಸೇರಿದರು. ವಿಜಯ ಚಿಕ್ಕಪ್ಪ ಗೇಟಿನ ವರೆಗೆ ಬಂದು, "ಇದೇನು?" ಎಂದು ಆಶ್ಚರ್ಯದಿಂದ ಕೇಳಿದರು.

ಹುಡುಗರು ನಡೆದದ್ದನ್ನೆಲ್ಲ ವಿವರಿಸಿದರು. ನವೀನ್ ಕೈಯಿಂದ ಅವರು ಬೋನನ್ನು ತೆಗೆದುಕೊಂಡು, "ಇದು ಬಹಳ ತಪ್ಪು. ಪೋಲೀಸ್ ಠಾಣೆಯಲ್ಲಿ ದೂರು ಕೊಡುತ್ತೇನೆ. ನಿಮ್ಮ ಚಿಕ್ಕಮ್ಮ ಅದರ ಕಾಲಿಗೆ ಬಟ್ಟೆ ಕಟ್ಟಿ ಶುಶ್ರೂಷೆ ಮಾಡುತ್ತಾಳೆ" ಅಂದರು ಚಿಕ್ಕಪ್ಪ.

ಚಿಕ್ಕಮ್ಮ ನಾಯಿಮರಿಯನ್ನು ಉಪಚರಿಸುತ್ತಿದ್ದ ಸಮಯಕ್ಕೆ ಸರಿಯಾಗಿ, ರೇಖ ಅಲ್ಲಿಗೆ ಬಂದಳು. ನವೀನ್ ಅವಳಿಗೆ, ಎಲ್ಲವನ್ನೂ ಮತ್ತೆ ವಿವರಿಸಿದ. ಈ ಪುಟ್ಟ ನಾಯಿಮರಿ ರೇಖಳಿಗೆ ತುಂಬ ಇಷ್ಟವಾಯಿತು. "ಅಮ್ಮ, ಈ ನಾಯಿಮರಿಯನ್ನು ನಾವೇ ಇಟ್ಟು ಕೊಳ್ಳೋಣವೇ? ನಮ್ಮ ಭಾಲೂ ನಾಯಿ ಸತ್ತ ನಂತರ, ನಮ್ಮ ಮನೆಯಲ್ಲಿ ನಾಯಿಮರಿಯೇ ಇಲ್ಲ. ಇದಕ್ಕೂ ಭಾಲೂವಿನ ಹೋಲಿಕೆಯೇ ಇದೆ—ಕಂದು ಬಣ್ಣ, ಕರಿ ಮೂತಿ. ಇದನ್ನು ನಾವು 'ಮರಿ ಭಾಲೂ' ಎಂದೇ ಕರೆಯೋಣ" ಎಂದಳು.

"ಮೊದಲು ಅದರ ಜೀವ ಉಳಿಸಲು ಪ್ರಯತ್ನಿಸೋಣ. ಆಹಾರವಿಲ್ಲದೇ ಅದು ಸೊರಗಿಹೋಗಿದೆ" ಅಂದರು ಅವಳ ತಾಯಿ.

"ಈ ನಾಯಿಮರಿಯನ್ನು ನಾನೇ ನೋಡಿಕೊಳ್ಳುತ್ತೇನೆ" ರೇಖಾ ಉತ್ಸಾಹದಿಂದ ನುಡಿದಳು. "ಅದು ಬೆಚ್ಚಗೆ ಮಲಗಲು ಅದಕ್ಕೆ ಒಂದು ಹಾಸಿಗೆ ಸಿದ್ಧ ಮಾಡುತ್ತೇನೆ. ನವೀನ್ ನನಗೆ ಸಹಾಯ ಮಾಡುವೆಯಾ?" ಎಂದು ರೇಖ ಕೇಳಿದಳು.

ರೇಖ ಕೊಟ್ಟಿಗೆಗೆ ಓಡಿದಳು. ನವೀನ್ ಅವಳನ್ನು ಹಿಂಬಾಲಿಸಿದ. ಅವರಿಗೆ ಗುಂಡನೆಯ ಕಾಲಿ ಬುಟ್ಟಿಯೊಂದು ಸಿಕ್ಕಿತು. ನವೀನ್ ಬುಟ್ಟಿಯನ್ನು ಚೊಕ್ಕಟ ಮಾಡಿದ. ರೇಖ ಬುಟ್ಟಿ ಯಲ್ಲಿ ಒಣಹುಲ್ಲನ್ನು ಹಾಕಿ ಅದರ ಮೇಲೆ ಚಿಂದಿ ಬಟ್ಟೆಗಳನ್ನು ಹಾಸಿದಳು. ನಾಯಿಮರಿ ಯನ್ನು ಆ ಬುಟ್ಟಿಯೊಳಗೆ ಮಲಗಿಸಿದಳು.

ರಾಮು ಮತ್ತು ರಾಣಿ ಓಡಿಬಂದರು. ರಾಣಿಯ ಕೈಯಲ್ಲಿ ಒಂದು ಪುಸ್ತಕವಿತ್ತು. "ನಾನು ಸಂಗ್ರಹಿಸಿರುವ ಕಾಡು ಹೂವುಗಳನ್ನು ನಿನಗೆ ತೋರಿಸಬೇಕು" ಎಂದು ಕಪಿಲನಿಗೆ ಹೇಳಿದರು.

"ಮೊದಲು ಅಲ್ಲೇನಿದೆ ನೋಡು" ಎಂದು ಕಪಿಲ್ ರಾಣಿಗೆ ನಾಯಿಮರಿಯನ್ನು ತೋರಿಸುತ್ತಾ ಹೇಳಿದ.

"ಈ ನಾಯಿಮರಿಗೆ ಉಣಿಸುವುದು ಮತ್ತು ಕುಡಿಸುವುದು ಹೇಗೆ ಎಂದು ಯೋಚಿಸು ತ್ತಿದ್ದೇನೆ" ಅಂದರು ಚಿಕ್ಕಮ್ಮ. "ಅದಕ್ಕೆ ಏನೇನೂ ಶಕ್ತಿ ಇಲ್ಲ. ತಾನಾಗಿಯೇ ಅದು ಏನನ್ನೂ ಕುಡಿಯಲಾರದು. ನನ್ನ ಬಳಿ ಫೀಡಿಂಗ್ ಬಾಟ್ಲ್ ಕೂಡಾ ಇಲ್ಲ" ಅಂದರು.

"ನನ್ನ ಗೊಂಬೆಯು ಚಿಕ್ಕ ಸೀಸೆಯಿಂದ ಕುಡಿಸಬಹುದೇ?" ಎಂದು ರಾಣಿ ಕೇಳಿದಳು.

"ಹೌದು, ಸರಿಯಾದ ಉಪಾಯ" ಎಂದ ಕಪಿಲ್. ಇಬ್ಬರು ಅವಳಿ ಮಕ್ಕಳು ಸೀಸೆ ತರಲು ಓಡಿ ಹೋದರು. ಅದು ನಾಯಿಮರಿಗೆ ಯೋಗ್ಯವಾಗಿತ್ತು. ಅದರ ನಿಪ್ಪಲ್ ಮೂಲಕ ಹಾಲು ಹೀರುವ ವಿಧಾನವನ್ನು ರೇಖ ನಾಯಿಮರಿಗೆ ಕಲಿಸಿಕೊಟ್ಟಳು.

"ನವೀನ್, ನೀನು ಮತ್ತೊಂದು ಸ್ಕೌಟ್ ಪರೀಕ್ಷೆಯಲ್ಲಿ ಉತ್ತೀರ್ಣನಾಗಿರುವೆಯೆಂಬುದು ನಿನಗೆ ಗೊತ್ತೇ?"

"ಹಾಗೆಂದರೆ?" ಅರ್ಥವಾಗದೆ ನವೀನ್ ಕೇಳಿದ.

"ಎಲ್ಲ ಪ್ರಾಣಿಗಳೊಡನೆ ಸ್ನೇಹ ಬೆಳೆಸುವುದು ಮಾದರಿ ಸ್ಕೌಟ್‌ನ ಲಕ್ಷಣ."

"ಸ್ಕೌಟ್‌ಗಳು ಮಾತ್ರವಲ್ಲ, ಕಬ್‌ಗಳೂ ಸಹ ಪ್ರಾಣಿಗಳನ್ನು ಪ್ರೀತಿಸುತ್ತಾರೆ" ಎಂದು ರಾಮು ಮಧ್ಯೆ ಪ್ರವೇಶಿಸಿ ನುಡಿದ.

ತನ್ನ ಪ್ರಾಮುಖ್ಯತೆ ಕಡಿಮೆಯಾಗದಂತೆ, "ಬುಲ್‌ಬುಲ್‌ಗಳು ಮತ್ತು ಗೈಡ್‌ಗಳು ಸಹ" ಎಂದು ರಾಣಿ ಧ್ವನಿ ಸೇರಿಸಿದಳು.

ಛೋಟಾ ಬಾಲೂವಿಗೆ ಹೊಟ್ಟೆ ತುಂಬಿ ನೋವು ಕಡಿಮೆಯಾಗಿ ಬುಟ್ಟಿಯಲ್ಲಿ ಮುದುಡಿ ಕೊಂಡು ಚೆನ್ನಾಗಿ ನಿದ್ರಿಸಿತು.



# ರಾತ್ರಿಯಲ್ಲಿ ಅಪಾಯದ ಎಚ್ಚರಿಕೆ

ಆ ದಿನದ ಘಟನೆಗಳು ನವೀನನ ಮನಸ್ಸಿನ ಮೇಲೆ ಅಚ್ಚಳಿಯದ ಪ್ರಭಾವ ಬೀರಿದ್ದವು. ಎಷ್ಟು ಹೊತ್ತಾದರೂ ನಿದ್ರೆ ಬರಲಿಲ್ಲ. "ಜಂಗಲ್ ಬುಕ್"ಅನ್ನು ಓದಲು ಪ್ರಾರಂಭಿಸಿದ. ಕಪಿಲ್‌ಗೆ ನಿದ್ರೆ ಬಂದ ನಂತರ ನವೀನ್ ದೀಪ ಆರಿಸಿ ಕಿಟಿಕಿಯ ಬಳಿ ಹೋಗಿ ನಿಂತ. ಕಪಿಲ್ ತನಗೆ ತೋರಿಸಿದ್ದ ಕೆಲವು ನಕ್ಷತ್ರಗಳನ್ನು ಗುರುತಿಸಲು ಪ್ರಯತ್ನಿಸಿದ.

ದೂರದಲ್ಲಿ ನರಿ ಕೂಗುತ್ತಿತ್ತು. ರಾತ್ರಿಯ ನಿಶ್ಶಬ್ದತೆಯಿಂದಾಗಿ ಅದರ ಕೂಗು ಬಹು ದೂರದ ವರೆಗೆ ಕೇಳುತ್ತಿತ್ತು. ನವೀನ್ ದಿಟ್ಟಿಸಿ ನೋಡುತ್ತಿದ್ದಂತೆ, ಸ್ಕೌಟ್ ಕ್ಯಾಂಪಿನ ಕೆಳಭಾಗದಿಂದ ಹೊಗೆಯು ಸುತ್ತಿ ಸುತ್ತಿ ಮೇಲೇರುತ್ತಿದ್ದುದು ಕಂಡಿತು.

ಹಠಾತ್ತನೆ ಬೆಂಕಿಯ ಕಿಡಿಗಳು ಮೇಲೇರಿದವು. ನಕ್ಷತ್ರಗಳ ಪತನದಂತೆ ಅವು ಕೆಳಗೆ ಉದುರಿದುವು. ಮತ್ತೊಂದು ಪೊದೆಯಿಂದಲೂ ಬೆಂಕಿಯು ಭುಗಿಲೆದ್ದಿತು. ಪುನಃ ನರಿಯ ಕೂಗು.



ನವೀನ್ ಅಶಾಂತನಾದ. ಕಪಿಲ್ ಹೇಳಿದ್ದ ಅತ್ಯಂತ ಭೀಕರ ಕಾಡ್ಗಿಚ್ಚುಗಳ ಪ್ರಾರಂಭವೇ ಇದು ಎಂದು ಯೋಚಿಸ ಲಾರಂಭಿಸಿದ. ಸ್ನೇಹಿತನನ್ನು ಎಬ್ಬಿಸ ಬೇಕೇ ಅಥವಾ ಇದು ತನ್ನ ಮೂರ್ಖ ತನವೋ ಪರೀಕ್ಷಿಸುವುದು ಯೋಗ್ಯವಲ್ಲ ವೆಂದು ಭಾವಿಸಿ, ಕಪಿಲ್‌ನ ಭುಜವನ್ನು ಅಲುಗಾಡಿಸಿ ಅವನ ಕಿವಿಯಲ್ಲಿ ಮೆಲ್ಲಗೆ ಉಸುರಿದ, "ಕಪಿಲ್, ಕಪಿಲ್, ಮೇಲೇಳು.

"ಏನದು ಹೇಳು" ಎಂದು ಕಪಿಲ್ ನಿದ್ರೆಗಣ್ಣಲ್ಲೇ ಕೇಳಿದ.

"ಕಾಡ್ಗಿಚ್ಚು ಹಬ್ಬುತ್ತಿರುವಂತೆ ಕಾಣುತ್ತಿದೆ. ನನಗೆ ಅಷ್ಟು ಖಚಿತವಾಗಿ ಗೊತ್ತಿಲ್ಲ" ಅಂದ ನವೀನ್.

ಕ್ಷಣದಲ್ಲಿ ಕಪಿಲ್ ಕತ್ತನ್ನು ಮುಂದೆ ಚಾಚಿ ನೋಡಿದ. "ಹೌದು, ಕಾಡ್ಗಿಚ್ಚೇ ಇರಬೇಕು. ಬೆಚ್ಚನೆ ಬಟ್ಟೆ ಹಾಕಿಕೊ.

ಟಾರ್ಚ್ ತೆಗೆದುಕೊ. ನೀನು ಕೆಳಗೆ ಬಾ. ನಾನು ಚಿಕ್ಕಪ್ಪನನ್ನು ಎಬ್ಬಿಸುತ್ತೇನೆ" ಅಂದ. ಕಪಿಲ್ ಬಟ್ಟೆಗಳನ್ನು ಧರಿಸಿ ಬೇಗನೆ ಸಿದ್ಧನಾದ. ಬೂಟ್ ಧರಿಸಿದ. ಟಾರ್ಚ್ ಹಿಡಿದು ಕೆಳಗೆ ಬಂದ.

ನವೀನ್ ಸಹ ಕೆಳಗೆ ಬರುವ ವೇಳೆಗೆ ವಿಜಯ ಚಿಕ್ಕಪ್ಪ ತಯಾರಾಗಿ ನಿಂತಿದ್ದರು. "ಬನ್ನಿ ಹೋಗೋಣ" ಎಂದರು ಚಿಕ್ಕಪ್ಪ.

ಬೆಟ್ಟದ ಆಚೆಯಿಂದ ಅಪಾಯ ಸೂಚಕವಾಗಿ ಹೊಡೆದ ಗಂಟೆಯ ಶಬ್ದವನ್ನು ಆಗಲೇ ಅವರು ಕೇಳಿದರು. ಪದೇ ಪದೇ ಗಂಟೆಯ ಶಬ್ದ ಕೇಳಿಬರುತ್ತಿತ್ತು.

ಅವರು ರಸ್ತೆಗೆ ಬರುವ ಹೊತ್ತಿಗೆ ಇನ್ನೂ ಅನೇಕ ಜನರು ಅವರ ಜೊತೆಗೂಡಿದರು. ಅವರುಗಳು ಬಕೆಟ್‌ಗಳನ್ನು ಅಥವಾ ಟಾರ್ಚ್‌ಗಳನ್ನು ಹಿಡಿದಿದ್ದರು.

ಅವರು ಅಲ್ಲಿಗೆ ಹೋಗುವಷ್ಟರಲ್ಲಿ ಬೆಂಕಿ ಹಬ್ಬಿಹೋಗಿತ್ತು. ಜನರು ಸಾಲಾಗಿ ನಿಂತು ನೀರು ತುಂಬಿದ ಬಕೆಟ್‌ಗಳನ್ನು ಕೈಯಿಂದ ಕೈಗೆ ರವಾನಿಸುತ್ತಿದ್ದರು. ಬಿಳಿಯ ಕೂದಲಿನ ಮುಂದಾಳನೊಬ್ಬ ಈ ಕೆಲಸಗಳ ಉಸ್ತುವಾರಿ ನಡೆಸುತ್ತಿದ್ದ. ವಿಜಯ ಚಿಕ್ಕಪ್ಪ, ಕಪಿಲ್ ಮತ್ತು ನವೀನ್ ಮೂವರೂ ಸಾಲಿನಲ್ಲಿ ನಿಂತರು. ನೀರು ಕೊಳವೆ ಬೆಂಕಿ ಉರಿಯುತ್ತಿದ್ದ ಜಾಗವನ್ನು ತಲಪುವಷ್ಟು ಉದ್ದ ಇರಲಿಲ್ಲ.

"ಈಗ ನಾವು ಎದುರು ದಿಕ್ಕಿನಿಂದ ಪ್ರತಿಯಾಗಿ ಬೆಂಕಿ ಹಚ್ಚಬೇಕು. ಕೆಲವು ಮಂದಿ ಸ್ವಯಂ ಸೇವಕರನ್ನು ಕರೆದುಕೊಂಡು ಬಾ ಜಸ್ವಂತ್" ಎಂದು ಮುಂದಾಳು ಕೂಗಿದ.

"ಬಂದೆ". ಒಂದು ಗಡಸು ಧ್ವನಿ ಕೇಳಿಬಂತು.

ಎತ್ತರವಾಗಿದ್ದ ಒಬ್ಬ ಸಿಖ್ ಯುವಕ, ಅವನ ಹಿಂದೆ ಇಬ್ಬರು ಮೂವರು ಓಡುತ್ತಿರುವುದನ್ನು ನವೀನ್ ಗಮನಿಸಿದ. ಬೆಟ್ಟದ ಮೇಲಕ್ಕೆ ಹತ್ತಿ ಪೊದೆಗಳಿಗೆ ಅವರು ಬೆಂಕಿ ಇಟ್ಟರು. ನವೀನ್‌ಗೆ ಆಶ್ಚರ್ಯ.

"ಕಪಿಲ್, ಅವರು ಏನು ಮಾಡುತ್ತಿದ್ದಾರೆ?" ನವೀನ್ ಕೇಳಿದ.

"ಎರಡೂ ಕಡೆಯಿಂದ ಬರುವ ಬೆಂಕಿ ಈ ಮರದ ಕೆಳಗೆ ಸಂಧಿಸಿದಾಗ ಬೆಂಕಿ ಶಮನವಾಗುತ್ತದೆ. ಬೆಂಕಿ–ಬೆಂಕಿಯನ್ನು ಆರಿಸುತ್ತದೆ, ನವೀನ್, ಅವನೇ ಜಸ್ವಂತ್ ನನ್ನ ಸ್ನೇಹಿತ" ಎಂದು ಕಪಿಲ್ ಹೇಳಿದ.

ಅನಂತರ ಕೆಲವರು ಕಾಡ್ಗಿಚ್ಚಿನ ಒಂದು ಅಂಚಿನಲ್ಲಿ ಉರಿಯುತ್ತಿದ್ದ ಪೊದೆಗಳನ್ನು ದೊಣ್ಣೆಯಿಂದ ಹೊಡೆಯುತ್ತಾ ಹೋದರು. ನೀರಿನಿಂದ ತೇವಗೊಂಡಿದ್ದ ಪೊದೆಗಳನ್ನು ಕಾಲಿನಿಂದ ತುಳಿದು ಬೆಂಕಿಯನ್ನು ಸಂಪೂರ್ಣವಾಗಿ ಆರಿಸುತ್ತಿದ್ದರು.

ಒಂದು ಕಿಡಿ ಉಳಿದರೂ ಅದರಿಂದ ಪುನಃ ಬೆಂಕಿ ಹೊತ್ತಿಕೊಳ್ಳುವ ಸಂಭವವಿರುತ್ತದೆ.

ಎರಡು ಪೊದೆಗಳಿಂದಲೂ ಎದುರು–ಬದುರಾಗಿ ಬಂದ ಬೆಂಕಿ ಒಂದಕ್ಕೊಂದು ತಗುಲಿದ ಕೂಡಲೇ ಆರಿಹೋಯಿತು. ಅದನ್ನು ಕಂಡು ನವೀನ್‌ಗೆ ಪರಮಾಶ್ಚರ್ಯ.

"ಮರಳು ಸುರಿಯಲು ಮತ್ತಷ್ಟು ಜನರು ಬೇಕು. ಬೇಗ ಬನ್ನಿ" ಜಸ್ವಂತ್ ಕೂಗಿದ.

ನವೀನ್ ಮತ್ತು ಕಪಿಲ್ ಈಗ ಮರಳು ಸುರಿಯುವ ಕೆಲಸಕ್ಕೆ ಕೈಹಚ್ಚಿದರು.

"ನಮಸ್ಕಾರ ಕಪಿಲ್, ನೀನು ಈ ಊರಿಗೆ ಬಂದಿರುವುದು ತಿಳಿಯಿತು. ಆದರೆ ಭೇಟಿಯಾಗಿರುವುದು ಎಂತಹ ಸಂದರ್ಭ! ಈಗ ಮಾತಿಗೆ ಸಮಯವಿಲ್ಲ. ಮರಳು ತುಂಬುವ ಜಾಗದಲ್ಲಿ ನೀನು ಸಹಾಯ ಮಾಡು" ಎಂದ ಜಸ್ವಂತ್.

ದೊಡ್ಡ ಪೆರೇಡ್ ಮೈದಾನದ ಒಂದು ತುದಿಯಲ್ಲಿ ಮರಳಿನ ರಾಶಿಯಿತ್ತು. ಅಲ್ಲಿಂದ ಮರಳನ್ನು ತುಂಬಿಕೊಂಡು ಸರಸರನೆ ಬೆಂಕಿಯ ಮೇಲೆ ಸುರಿಯುತ್ತಿದ್ದರು. ಸ್ವಲ್ಪ ಹೊತ್ತಿನಲ್ಲೇ ವಿಜಯ ಚಿಕ್ಕಪ್ಪ ಹುಡುಗರ ಬಳಿಗೆ ಬಂದರು. "ನಾವು ನಮ್ಮ ಕೈಲಾದ ಪ್ರಯತ್ನ ಮಾಡಿದ್ದೇವೆ. ಈಗ ಸಿಮ್ಲಾದಿಂದ ಅಗ್ನಿಶಾಮಕ ದಳ ಬಂದಿದೆ. ಜಸ್ವಂತ್ ನೀನೂ ನಮ್ಮ ಜೊತೆಯಲ್ಲಿ ಬಂದು ಚಹ ಕುಡಿದು ಹೋಗು" ಅಂದರು ಚಿಕ್ಕಪ್ಪ.

ಎಲ್ಲರೂ ದಣಿದಿದ್ದರು. ಆದರೂ, ಒಂದು ಒಳ್ಳೆಯ ಕೆಲಸ ಮಾಡಿದೆವಲ್ಲಾ ಎಂಬ ಸಮಾಧಾನ. ಎಲ್ಲರೂ ತೋಟದತ್ತ ನಡೆದರು. ಮನೆಯಲ್ಲಿ ಕುಳಿತು ಚಹ ಕುಡಿಯುತ್ತಿದ್ದಾಗ ಕಪಿಲ್, ಜಸ್ವಂತನನ್ನು ಕೇಳಿದ: "ಕುರುಬನ ಗುಡಿಸಲಿನಲ್ಲಿ ಒಂದೆರಡು ರಾತ್ರಿ ಕ್ಯಾಂಪ್‌ಗೆ ನಮ್ಮನ್ನು ಕರೆದುಕೊಂಡು ಹೋಗುತ್ತೀಯಾ?"

"ನನಗೂ ಇಷ್ಟವೇ. ಈ ವಾರದ ಕಡೆಯಲ್ಲಿ ನಾವು ಮೂವರೂ ಅಲ್ಲಿಗೆ ಹೋಗೋಣ. ಆದರೆ ನಾಳೆ ನಾನು ಚಾಂದ್‌ಪೂರ್‌ನ ದನದ ಜಾತ್ರೆಯಲ್ಲಿ ನೆರವಾಗಲು ಸ್ಕೌಟ್ ತಂಡವೊಂದರೊಡನೆ ಹೋಗುತ್ತೇನೆ. ಅವರಿಗೆ ಇನ್ನೂ ಸ್ವಯಂ ಸೇವಕರು ಬೇಕಾಗಿದ್ದಾರೆ. ನೀನು ನಮ್ಮ ಜೊತೆಯಲ್ಲಿ ಬಂದರೆ ಬಹಳ ಚೆನ್ನಾಗಿರುತ್ತದೆ ಕಪಿಲ್" ಎಂದು ಜಸ್ವಂತ್ ನುಡಿದ.

ಮಾರನೇ ದಿನ ಬೆಳಿಗ್ಗೆ ಸ್ವಯಂ ಸೇವಕರ ತಂಡದೊಡನೆ ಹೋಗುವುದೆಂದು ಜಸ್ವಂತ್ ಮತ್ತು ಕಪಿಲ್ ನಿರ್ಧರಿಸಿದರು.

# ಚಾಂದ್‌ಪೂರ್ ಮೇಳ

ಬೆಟ್ಟಪ್ರದೇಶದ ಇಳಿಜಾರಿನಲ್ಲಿ, ತಾರದಿಂದ ಸುಮಾರು ಐವತ್ತು ಮೈಲಿ ದೂರದಲ್ಲಿ, ಚಾಂದ್ ಪೂರ್ ಹಳ್ಳಿ ಇದೆ. ಕಾಲ್ಕಾಗೆ ಹೋಗುವ ಹೆದ್ದಾರಿ ಕವಲೊಡೆದ ಸಣ್ಣ ರಸ್ತೆ ನಮ್ಮನ್ನು ಈ ಹಳ್ಳಿಗೆ ಒಯ್ಯುತ್ತದೆ. ಈ ಹಳ್ಳಿಯಲ್ಲಿ ಪ್ರತಿ ವರ್ಷ ಮೂರು ದಿನಗಳ ಜಾತ್ರೆ ನಡೆಯುತ್ತದೆ. ಇಲ್ಲಿ ಒಂದು ಸಣ್ಣ ಬೆಟ್ಟದ ಮೇಲೆ ಚಂಡಿದೇವಿಯ ದೇವಾಲಯವಿದೆ. ಅದರ ಮುಂದೆಯೇ ಒಂದು ಸಣ್ಣದಾದ ದೇವಿಕೆರೆಯೂ ಇದೆ. ಸುತ್ತಮುತ್ತಲ ಬೆಟ್ಟಪ್ರದೇಶದ ಗ್ರಾಮಸ್ಥರು ದೇವಿಯ ಆರಾಧನೆಗಾಗಿ ಹಾಗೂ ದನಕರುಗಳ ವ್ಯಾಪಾರಕ್ಕಾಗಿ ಅಲ್ಲಿಗೆ ಬರುವುದು ಪದ್ಧತಿ.

ಮಾರನೇ ದಿನ ಜಸ್ವಂತ್ ಮತ್ತು ಕಪಿಲ್ ಸಿಮ್ಲಾ ಸ್ಕೌಟ್ ತಂಡದೊಡನೆ, ಚಾಂದ್ ಪೂರ್‌ಗೆ ಬಸ್ಸಿನಲ್ಲಿ ಪ್ರಯಾಣ ಮಾಡಿದರು.

ಚಾಂದ್‌ಪೂರ್‌ನಲ್ಲಿ ದೇವಾಲಯದ ಕೆಳಗೆ ಇದ್ದ ಮೈದಾನದಲ್ಲಿ ಜನಗಳ ಮತ್ತು ದನಕರುಗಳ ಸಂದಣಿ ಸೇರಿತ್ತು. ಸ್ಕೌಟ್‌ಗಳಿಗೆ ಅವರವರು ಮಾಡಬೇಕಾದ ಕೆಲಸಗಳನ್ನು ತಕ್ಷಣವೇ ಹಂಚಲಾಯಿತು. ದನಕರುಗಳು ಸೇರುವ ಜಾಗದ ಸುತ್ತ ಬೇಲಿಯನ್ನು ನಿರ್ಮಿಸು ವುದು ಜಸ್ವಂತ್‌ನ ತಂಡದ ಕೆಲಸವಾಯಿತು. ಜಾತ್ರೆಯ ವೈದ್ಯರ ಬಳಿ ನೆರವಾಗುವುದು ಕಪಿಲನ ಕೆಲಸವಾಯಿತು. ಇಲ್ಲಿ ವೈದ್ಯರು ಮಕ್ಕಳಿಗೆ ಸಿಡುಬಿನ ಮದ್ದನ್ನು ಚುಚ್ಚುತ್ತಿದ್ದರು. ಮತ್ತು ಅಸ್ವಸ್ಥರನ್ನು ಉಪಚರಿಸುತ್ತಿದ್ದರು. ಮಕ್ಕಳು ಧೈರ್ಯವಾಗಿದ್ದರೂ, ಅವುಗಳ ತಾಯಂದಿರಿಗೆ ಏನೋ ಹೆದರಿಕೆ. ಮಕ್ಕಳಿಗೆ ಏನೂ ತೊಂದರೆಯಾಗುವುದಿಲ್ಲವೆಂದು ಅವರಿಗೆ ಭರವಸೆ ಕೊಡುವುದು ಕಪಿಲ್‌ನ ಕೆಲಸ.

ವಯಸ್ಸಾದವರೂ ಸಹ ಜಾತ್ರೆಗೆ ಬಂದಿದ್ದರು. ಅವರು ದೇವಿಗೆ ತಮ್ಮ ಸೇವೆ ಸಲ್ಲಿಸಲು ಬಂದಿದ್ದರು. ಕಪಿಲ್ ಸ್ಕೌಟ್ ಕ್ಯಾಂಪಿಗೆ ಹಿಂದಿರುಗುತ್ತಿದ್ದಾಗ ಅಜ್ಜಿಯೊಬ್ಬಳು ದೇವಾಲಯದ ಮೆಟ್ಟಿಲುಗಳನ್ನು ಹತ್ತಲು ಬಹಳ ಪ್ರಯಾಸಪಡುತ್ತಿದ್ದಳು. ಇಡೀ ದಿನದ ಕೆಲಸದಿಂದ ಅವನು ಬಳಲಿ ಬೆಂಡಾಗಿದ್ದ. ಆದರೂ ಮುದುಕಿಗೆ ಸಹಾಯದ ಅವಶ್ಯಕತೆ ಇದೆ ಎಂಬುದನ್ನು ಅರಿತು ತನ್ನ ಕೈ ಮುಂದೆ ಮಾಡಿ ಹೇಳಿದ:

"ಅಜ್ಜಿ, ನಾನು ನಿಮಗೆ ಸಹಾಯ ಮಾಡುತ್ತೇನೆ."

"ಬಹಳ ಉಪಕಾರ ಕಣಪ್ಪಾ" ಎಂದು ಹೇಳಿ ಅಜ್ಜಿ ಅವನ ತೋಳಿನ ಆಸರೆ ಪಡೆದಳು.

ದೇವಿಕೆರೆಯಲ್ಲಿ ಅನೇಕ ಜನರು ಸ್ನಾನ ಮಾಡುತ್ತಿದ್ದರು. ಅಲ್ಲಿ ಹರಿ ಎಂಬ ಒಬ್ಬ ತರುಣ ಸ್ಕೌಟ್ ಕಾರ್ಯನಿರತನಾಗಿದ್ದ. ಸ್ನಾನವನ್ನು ಮುಗಿಸಿದ್ದ ಮುದುಕನೊಬ್ಬನಿಗೆ ಹರಿ

ಸಹಾಯ ಮಾಡುತ್ತಿದ್ದಾಗ ಹಠಾತ್ತನೆ ಯಾರೋ ಚೀರುವ ಶಬ್ದ ಅವನ ಗಮನವನ್ನು ಸೆಳೆಯಿತು. ನೋಡಿದರೆ ಒಬ್ಬ ಬಾಲಕ ನೀರಿನಲ್ಲಿ ಮುಳುಗುತ್ತಿದ್ದ.

ಕೂಗು ಕೇಳಿದ್ದೇ ತಡ ಹರಿ ತನ್ನ ಚಪ್ಪಲಿಗಳನ್ನು ಎಸೆದು ನೀರಿಗೆ ಹಾರಿದ. ಆ ಚಿಕ್ಕ ಹುಡುಗ ಒಮ್ಮೆ ನೀರಿನಲ್ಲಿ ಮೇಲಕ್ಕೆ ಬಂದು ಮತ್ತೆ ಮುಳುಗಿದ. ಹರಿ ನೀರಿನೊಳಗೇ ಈಜಿ ಹುಡುಗನ ಕೆಳಗೆ ಬಂದು ಅವನನ್ನು ತನ್ನ ತೋಳಿನಲ್ಲಿ ಹಿಡಿದುಕೊಂಡು ಈಜಿ ದಡ ಸೇರಿದ. ದೂರದಿಂದಲೇ ಇದನ್ನು ನೋಡಿದ ಕಪಿಲ್ ಕೊಳದ ಬಳಿ ಓಡಿ ಬಂದು ಬಗ್ಗಿ ಹುಡುಗನನ್ನು ನೀರಿನಿಂದ ಆಚೆಗೆ ಎಳೆದುಕೊಂಡ. ನಂತರ ಆ ಬಾಲಕನನ್ನು ಬೋರಲಾಗಿ ಮಲಗಿಸಿ ಬೆನ್ನಿನ ಎರಡೂ ಪಕ್ಕಗಳಲ್ಲಿ ತನ್ನ ಎರಡೂ ಮೊಣಕಾಲುಗಳನ್ನು ಊರಿ ಕುಳಿತು ಆ ಮಗುವಿನ ಬೆನ್ನನ್ನು ಒಂದೇ ಸಮನೆ ತಿಕ್ಕಲಾರಂಭಿಸಿದ. ಪ್ರಾಣಾಪಾಯದಲ್ಲಿದ್ದವರನ್ನು ರಕ್ಷಿಸುವ ಈ ವಿಧಾನವನ್ನು ಅವನು ಕಲಿತಿದ್ದ.

ನೀರು ಸೋರುತ್ತಿದ್ದ ಬಟ್ಟೆಗಳಲ್ಲಿದ್ದ ಹರಿ, "ಹುಡುಗ ಹೇಗಿದ್ದಾನೆ?" ಎಂದು ಆತಂಕದಿಂದ ಕೇಳಿದ.



"ಹುಡುಗ ಸರಿಹೋಗುತ್ತಾನೆ. ಅದೃಷ್ಟ ವಶಾತ್ ಅವನು ಹೆಚ್ಚು ನೀರು ಕುಡಿದಿಲ್ಲ. ಎಂದ ಕಪಿಲ್. ಹುಡುಗ ಉಸಿರು ಬಿಟ್ಟದ್ದಕ್ಕೆ ಸ್ವಲ್ಪ ನೀರು ಹೊರ ಬಂತು. ಅವನು ಅಳ ಲಾರಂಭಿಸಿದ. "ಬೇಗ ಬಟ್ಟೆ ಬದಲಾಯಿಸು ಹರಿ" ಎಂದು ಕಪಿಲ್ ಕೂಗಿಕೊಂಡ.

"ನಾನು ಕೆಳಗೆ ಹೋಗುವ ದಾರಿಯಲ್ಲಿ ವೈದ್ಯರಿಗೆ ತಿಳಿಸುತ್ತೇನೆ" ಅಂದ ಹರಿ. ಗಾಬರಿಗೊಂಡಿದ್ದ ಜನ ಹುಡುಗನ ಸುತ್ತ ನಿಂತಿದ್ದರು. "ಆ ಮಗುವಿಗೆ ಉಸಿರಾಡಲು ಸ್ವಲ್ಪ ಜಾಗ ಬಿಡಿ. ಅಷ್ಟು ಹತ್ತಿರದಲ್ಲಿ ಗುಂಪುಕಟ್ಟಿ ನಿಲ್ಲಬೇಡಿ" ಎಂದು ಹೇಳಿ ಅಲ್ಲಿಂದ ಹೊರಟ.

ಮಗುವಿನ ಪರಿಸ್ಥಿತಿ ಸುಧಾರಿಸಿತು. "ಈ ಮಗು ಯಾರದು?" ಎಂದು ಕಪಿಲ್ ಗುಂಪನ್ನು ಆತಂಕದಿಂದ ಕೇಳಿದ.

ಅಲ್ಲೇ ನಿಂತಿದ್ದ ಕುರಿ ಕಾಯುವ ಹುಡುಗನೊಬ್ಬ ಹೇಳಿದ: "ಇವನು ನನ್ನ ತಮ್ಮ ಸ್ವಾಮಿ."

"ನೀನು ಅವನನ್ನು ಸರಿಯಾಗಿ ನೋಡಿಕೊಳ್ಳಬೇಕು" ಎಂದು ಕಪಿಲ್ ಕುರಿ ಕಾಯುವ ಹುಡುಗನಿಗೆ ಎಚ್ಚರಿಕೆ ನೀಡಿದ.

ಸ್ವಲ್ಪ ಹೊತ್ತಿನಲ್ಲೇ ಒಂದು ಬೆಚ್ಚನೆಯ ಹೊದಿಕೆಯನ್ನು ಮತ್ತು ಸ್ವಲ್ಪ ಬಿಸಿ ಹಾಲನ್ನು ತೆಗೆದುಕೊಂಡು, ವೈದ್ಯರು ಅಲ್ಲಿಗೆ ಬಂದರು. "ನೀವಿಬ್ಬರು ಸ್ಕೌಟ್‌ಗಳು ಅಮೋಘವಾಗಿ ಸೇವೆ ಮಾಡಿದ್ದೀರಿ. ಅವನು ಈಗಲೇ ಹುಷಾರಾಗುತ್ತಾನೆ" ಎಂದು ಅವರು ಹೇಳಿದರು.

ಸ್ಕೌಟ್ ಗುಡಾರದ ಬಳಿ ಜಸ್ವಂತ್ ಕಪಿಲ್‌ಗಾಗಿ ಕಾಯುತ್ತಾ ನಿಂತಿದ್ದ. "ಏನು ಮಾಡುತ್ತಿದ್ದಿ ಜಸ್ವಂತ್?" ಕಪಿಲ್ ಪ್ರಶ್ನಿಸಿದ.

"ಒಂದು ಕರು ತಪ್ಪಿಸಿಕೊಂಡಿತ್ತು. ನಾನು ಮತ್ತು ಕುಮಾರ್ ಅದನ್ನು ಹುಡುಕುತ್ತಾ ಹೊರಟಿದ್ದೆವು. ಆ ಹೋರಿಗರುವನ್ನು ಹಿಡಿಯಲು ನಾವು ಸಾಕಷ್ಟು ಓಡಬೇಕಾಯಿತು" ಎಂದು ಜಸ್ವಂತ್ ನಗುತ್ತಾ ಹೇಳಿದ.

"ಕರ್ನಾಲ್‌ನಲ್ಲಿ ಅಂತರ–ರಾಜ್ಯ ಕ್ರೀಡಾ ಕೂಟದಲ್ಲಿ ನಾವು ಮಾಡಿದ ಕೆಲಸಗಳು ಬೇರೆ ರೀತಿಯದಾಗಿದ್ದುವು" ಆಲೋಚನಾಮಗ್ನನಾಗಿ ಕಪಿಲ್ ಹೇಳಿದ. ವಯಸ್ಸಾದ ವ್ಯಕ್ತಿಗಳನ್ನು ರಸ್ತೆ ದಾಟಿಸುವುದು, ಸರಿಯಾದ ಬಸ್ಸನ್ನು ಹತ್ತಲು ಜನರಿಗೆ ಸಹಾಯ ಮಾಡುವುದು, ಗೇಟ್‌ಗಳಲ್ಲಿ ಟಿಕೇಟ್‌ಗಳನ್ನು ಪರೀಕ್ಷಿಸುವುದು ಮತ್ತು ಜನರನ್ನು ಕರೆದೊಯ್ದು ಅವರವರ ಸ್ಥಾನಗಳಲ್ಲಿ ಕುಳ್ಳಿರಿಸುವುದು."

ಜಸ್ವಂತ್ ಎಲ್ಲ ಮಾತಿಗೂ ಹೂಗುಟ್ಟುತ್ತಿದ್ದ. "ನಗರದ ಸಮಸ್ಯೆಗಳೇ ಬೇರೆ. ಹಳ್ಳಿಗಳ ಸಮಸ್ಯೆಗಳೇ ಬೇರೆ. ಹಳ್ಳಿ ಜನರನ್ನು ಕಂಡರೆ ನನಗೆ ಬಲು ಇಷ್ಟ. ಅವರು ಸ್ನೇಹಮಯಿಗಳು, ಕಷ್ಟಪಟ್ಟು ದುಡಿಯುವ ಜನ. ಆದರೂ ಅವರು ಸದಾ ನುಗು–ನಗುತ್ತಾ ಇರುತ್ತಾರೆ. ಅವರು ಹಾಡುವುದನ್ನು ಕೇಳು" ಅಂದ ಜಸ್ವಂತ್.

ಮೈದಾನದ ಆಚೆಯಿಂದ ಗಿರಿಜನರು ಹಾಡುತ್ತಿದ್ದ ಜಾನಪದ ಗೀತೆ ಕೇಳುತ್ತಾ ಇತ್ತು. ಹೆಂಗಸರು ಒಲೆಗಳನ್ನು ಹೊತ್ತಿಸಿ ತಮ್ಮ ಸರಳವಾದ ಊಟವನ್ನು ಸಿದ್ಧಪಡಿಸುತ್ತಿದ್ದರು.

"ನವೀನ್ ಸಹ ಇಲ್ಲಿಗೆ ಬಂದಿದ್ದರೆ ಎಷ್ಟು ಚೆನ್ನಾಗಿ ಇರುತ್ತಿತ್ತು" ಅಂದ ಕಪಿಲ್.

"ನಾವು ನವೀನನನ್ನು ಕುರುಬನ ಗುಡಿಸಲಿಗೆ ಕ್ಯಾಂಪಿಗೆ ಕರೆದುಕೊಂಡು ಹೋಗೋಣ. ಮುಂದಿನ ವರ್ಷ ಅವನೂ ಉತ್ತಮ ಸ್ಕೌಟ್ ಆಗಬಹುದು" ಅಂದ ಜಸ್ವಂತ್. ರಾತ್ರಿಯಾಯಿತು. ಹುಡುಗರು ಹೊರಟರು.



ಇತ್ತ ನವೀನ್ ಕ್ಯಾಂಪ್‌ಗಾಗಿ ಸಿದ್ಧಗೊಳ್ಳುತ್ತಿದ್ದ. ಪ್ರತಿ ದಿನ ಬೆಳಿಗ್ಗೆ ಉಪಹಾರವಾದ ಕೂಡಲೇ ಅವನ ತಯಾರಿ ಪ್ರಾರಂಭ. ಅವನು ಸಾಮಾನುಗಳನ್ನು ಬೆನ್ನಿನ ಮೇಲೆ ಹೇರಿಕೊಂಡು ನಡೆಯುವುದನ್ನು ಅಭ್ಯಾಸ ಮಾಡಿಕೊಳ್ಳುತ್ತಿದ್ದ. ಬದಲಾಯಿಸಲು ಬಟ್ಟೆಗಳು, ನಿದ್ರಿಸುವುದಕ್ಕೆ ಬಳಸುವ ಬೆಚ್ಚನೆಯ ಚೀಲ ಮತ್ತು ಅಡಿಗೆ-ಸಾಮಾನುಗಳನ್ನು ಹೊತ್ತು ಅವನು ಓಡಾಡು ತ್ತಿದ್ದ. ಅಡಿಗೆಯನ್ನು ತಾನೇ ಮಾಡಿಕೊಳ್ಳುವುದೂ ಸಹ ಸ್ಕೌಟ್‌ಗಳು ಎದುರಿಸಬೇಕಾದ ಪರೀಕ್ಷೆ ಎಂಬುದು ಅವನಿಗೆ ಗೊತ್ತಿತ್ತು.

ಸಂಜೆಗೆ ಮುಂಚೆ ಕಪಿಲ್ ಮತ್ತು ಜಸ್ವಂತ್ ಹಿಂತಿರುಗಿದರು. ಇಡೀ ಸಂಜೆ ದನದ ಜಾತ್ರೆಯಲ್ಲಿ ತಮಗಾದ ಸ್ವಾರಸ್ಯದ ಅನುಭವಗಳನ್ನು ಅವರಿಬ್ಬರೂ ನೆನೆಸಿಕೊಳ್ಳುತ್ತಿದ್ದರು. ಜೊತೆಗೆ ಕ್ಯಾಂಪಿಗೆ ಆಗಬೇಕಾಗಿರುವ ಏರ್ಪಾಟುಗಳ ಬಗ್ಗೆಯೂ ಅವರು ಮಾತನಾಡಿದರು.





# ವಿಹಾರ

"ಟಿಪ್, ಟಿಪ್ ! ಟಿಪ್, ಟಿಪ್ !

ಶನಿವಾರ ಬೆಳಗಾಯಿತು. ಮರಕುಟಿಗದ ಶಬ್ದದಿಂದ ಕಪಿಲ್ ಮತ್ತು ನವೀನ್ ಎಚ್ಚರಗೊಂಡರು. ಇಬ್ಬರೂ ಹಾಸಿಗೆ ಬಿಟ್ಟೆದ್ದರು. ಬೇಗನೆ ತಯಾರಾದರು.

"ಹುಡುಗರಾ, ಕೆಳಗೆ ಬನ್ನಿ. ಜಸ್ವಂತ್ ನಿಮಗಾಗಿ ಕಾದಿದ್ದಾನೆ" ಎಂದು ಚಿಕ್ಕಪ್ಪ ಕೆಳಗಿನಿಂದಲೇ ಕೂಗಿದರು.

ಜಸ್ವಂತ್ ಅಡಿಗೆಮನೆಯಲ್ಲಿ ನಾಯಿಮರಿ ಜೊತೆಯಲ್ಲಿ ಆಡುತ್ತಿದ್ದ. ಅವನು ಒಂದು ಬೆನ್ನುಚೀಲ, ಒಂದು ಕೈಪೆಟ್ಟಿಗೆ ಹಾಗೂ ನೀರಿಗಾಗಿ ಒಂದು ದೊಡ್ಡ ಸೀಸೆಯನ್ನು ತಂದಿದ್ದ. ಅವನ ಬಳಿ ಹಗ್ಗದ ಸುರುಳಿ ಮತ್ತು ಚಿಕ್ಕ ಕೈಗೊಡಲಿ ಸಹ ಇತ್ತು.

"ನಿಮ್ಮ ಬಳಿ ಒಂದು ಸೀಮೆ ಎಣ್ಣೆಯ ಲಾಂದ್ರವನ್ನು ಇಟ್ಟುಕೊಂಡಿರಬೇಕು. ಆ ಲಾಂದ್ರದಲ್ಲಿ ಎಣ್ಣೆ ಇದೆಯೋ ಇಲ್ಲವೋ ಎಂಬುದನ್ನು ಮೊದಲು ನೋಡಿಕೊಳ್ಳಿ" ಅಂದರು ವಿಜಯ ಚಿಕ್ಕಪ್ಪ.

ಕ್ಯಾಂಪ್ ಚೀಲವನ್ನು ಬೆನ್ನಿಗೆ ಏರಿಸಿ ನಡೆಯುವ ಅಭ್ಯಾಸ ಮಾಡಿದ್ದುದು ನವೀನ್‌ಗೆ ಸಂತೋಷವಾಯಿತು. ಜಸ್ವಂತ್ ಮತ್ತು ಕಪಿಲ್‌ಗೆ ಸಮನಾಗಿ ತಾನು ನಡೆಯಬಹುದೆಂಬ ನಂಬಿಕೆ ಅವನಿಗೆ ಉಂಟಾಗಿತ್ತು.

"ಕಟ್ಟಿಗೆಗಳನ್ನು ಜೋಡಿಸಿ, ಅದಕ್ಕೆ ಬೆಂಕಿ ಹೊತ್ತಿಸುವ ವಿಧಾನ ನಿನಗೆ ಗೊತ್ತೆ?" ಎಂದು ಜಸ್ವಂತ್ ನವೀನನನ್ನು ಕೇಳಿದ.

"ಈ ಕೆಲಸವನ್ನು ನಾನೆಂದೂ ಮಾಡಿಲ್ಲ" ಎಂದ ನವೀನ್.

"ಹಾಗಾದರೆ ಇಂದು ರಾತ್ರಿ ಇದರಲ್ಲಿ ನಿನಗೆ ಮೊದಲ ಪಾಠ. ನೀನು ಸ್ಕೌಟ್ ಪರೀಕ್ಷೆಯಲ್ಲಿ ಪಾಸಾಗಬೇಕಾದರೆ ಎರಡಕ್ಕಿಂತ ಹೆಚ್ಚು ಕಡ್ಡಿಗಳನ್ನು ಗೀರದೆ ಬೆಂಕಿ ಹಚ್ಚಬೇಕು. ಇದಕ್ಕೆ ಮೊದಲು ಕಟ್ಟಿಗೆಯನ್ನು ಸಿದ್ಧಪಡಿಸಿಕೊಳ್ಳಬೇಕು. ಅದಕ್ಕೆಂದೇ ನಾನು ಈ ಕೈಗೊಡಲಿ ತಂದಿದ್ದೇನೆ" ಅಂದ ಜಸ್ವಂತ್.

"ನಾವು ಬೆಂಕಿಯನ್ನು ಆರಿಸುವಾಗ ತುಂಬ ಎಚ್ಚರಿಕೆ ವಹಿಸಬೇಕು. ಅಜಾಗರೂಕರಾಗಿ ಒಂದು ಗೀರಿದ ಕಡ್ಡಿಯನ್ನು ಎಸೆಯುವುದರಿಂದ ಅಥವಾ ವಿಹಾರ ಮುಗಿದ ಬಳಿಕ ಬೆಂಕಿಯನ್ನು ಚೆನ್ನಾಗಿ ಆರಿಸದೇ ಹಾಗೆಯೇ ಬಿಟ್ಟುಹೋಗುವುದರಿಂದ ಕಾಡ್ಗಿಚ್ಚು ಉಂಟಾಗಬಹುದು" ಎಂದು ಕಪಿಲ್ ಹೇಳಿದ.

"ಹೌದು, ನಾವು ಜಾಗರೂಕರಾಗಿರುತ್ತೇವೆ" ಎಂದ ನವೀನ್.



# ಕುರುಬನ ಗುಡಿಸಲು

ಆಕಾಶದಲ್ಲಿ ಮೋಡ ಕವಿಯುತ್ತಿತ್ತು, ಸರಿಯುತ್ತಿತ್ತು. ಸೂರ್ಯ ಕಣ್ಣುಮುಚ್ಚಾಲೆ ಆಡು ತ್ತಿದ್ದ. ಸಂಜೆಯಾಗುತ್ತಿದ್ದಂತೆ ಆಕಾಶದಲ್ಲಿ ಕಿತ್ತಳೆ ಹಾಗೂ ಹೊಂಬಣ್ಣ ಕವಿಯಿತು.

ಮೂವರು ಹುಡುಗರು ಕುರುಬನ ಕುಟೀರದತ್ತ ಹೊರಟರು. ದಟ್ಟವಾದ ಕಾಡಿನ ಮಧ್ಯೆ ಕಲ್ಲುರಸ್ತೆಯಲ್ಲಿ ನಡೆದುಕೊಂಡು ಹೋದರು. ಕಾಡು ದಾಟಿ ಬೆಟ್ಟವನ್ನೇರಿದರು. ಬೆಟ್ಟದ ಮೇಲೆ ಮಟ್ಟಸವಾದ ಮೈದಾನ. ಮೈದಾನದ ಒಂದು ತುದಿಯಲ್ಲಿ ಕೆಲವು ಮರಗಳು. ಅದರ ಸುತ್ತ ಪೊದೆಗಳು. ಮೈದಾನದ ಮಧ್ಯದಲ್ಲಿ ಕುರುಬನ ಗುಡಿಸಲು. ಅದು ಮರದ ದಿಮ್ಮಿಗಳಿಂದ ಕಟ್ಟಿದ್ದ ಗುಡಿಸಲು. ಅದರಲ್ಲಿ ಒಂದೇ ಒಂದು ಕೋಣೆ. ನೆಲಕ್ಕೆ ಹುಲ್ಲು ಹಾಸಿ, ಅದರ ಮೇಲೆ ಮಣ್ಣಿನ ಗಾರೆ.

"ಕುರಿಗಳು ಈ ಗುಡಿಸಲನ್ನು ಗಲೀಜು ಮಾಡಿವೆ" ಅಂದ ಕಪಿಲ್.

"ಕಸವನ್ನು ತೆಗೆದು ಸ್ವಚ್ಛ ಮಾಡಿರಿ. ನಾನು ಬೆಂಕಿ ಹೊತ್ತಿಸಲು ಕಟ್ಟಿಗೆ ತರುತ್ತೇನೆ. ಎಲ್ಲ ಕೆಲಸವನ್ನು ಸರ-ಸರ ಮುಗಿಸಬೇಕು. ಸೂರ್ಯ ಮುಳುಗುವ ಹೊತ್ತಾಯಿತು" ಎಂದು ಹೇಳುತ್ತಿದ್ದಂತೆ ಜಸ್ವಂತ್ ಕೈಲಿ ಹಗ್ಗವನ್ನು ಮತ್ತು ಕೊಡಲಿಯನ್ನು ಹಿಡಿದು ಓಡಿದ.

ಕಪಿಲ್ ಮತ್ತು ನವೀನ್ ಸಣ್ಣ ಸಣ್ಣ ಕಡ್ಡಿಗಳನ್ನು ಒಟ್ಟಿಗೆ ಸೇರಿಸಿ ಕಟ್ಟಿ, ಒಂದು ಪೊರಕೆ ಮಾಡಿದರು. ಅದರಿಂದ ಗುಡಿಸಲನ್ನು ಸ್ವಚ್ಛಗೊಳಿಸಿದರು. ನವೀನ್ ಮಲಗುವ ಸ್ಥಳವನ್ನು ಅಣಿಗೊಳಿಸಿದ. ಕಪಿಲ್ ಮೂರು ಕಲ್ಲುಗಳನ್ನು ಇಟ್ಟು ಬೆಂಕಿ ಹೊತ್ತಿಸಲು ಜಾಗ ಮಾಡಿದ.

ಜಸ್ವಂತ್ ಕಟ್ಟಿಗೆ ಹೊರೆಯನ್ನು ಹೊತ್ತು ತಂದ. ಜೊತೆಗೆ ಶಂಕುವಿನಾಕಾರದ ಒಣ ಕಾಯಿಗಳನ್ನು ತಂದಿದ್ದ. ಗುಡಿಸಲು ಮುಂದೆ ಬೆಳೆದಿದ್ದ ಹುಲ್ಲನ್ನು ಕೆತ್ತಿ, ಸ್ವಲ್ಪ ಜಾಗ ಮಾಡಿದ.

"ನವೀನ್ ಈಗ ನೋಡು. ನಾನು ದೊಡ್ಡ ಉರಿ (ಉತ್ಸವಾಗ್ನಿ) ಹಾಕುತ್ತೇನೆ" ಎಂದು ಜಸ್ವಂತ್ ಕೂಗಿದ.

ಜಸ್ವಂತ್ ಶಂಕಾಕೃತಿಯ ಕಾಯಿಗಳನ್ನು ಗುಪ್ಪೆಯಾಗಿಟ್ಟ. ಅದರ ಸುತ್ತ ಸಣ್ಣ ಸಣ್ಣ ಕಡ್ಡಿಗಳನ್ನು ಇರಿಸಿದ. ಅವುಗಳ ಮೇಲೆ ದೊಡ್ಡ ಕಟ್ಟಿಗೆಯನ್ನು ಇಟ್ಟ.

"ಈ ಕಾಯಿಗಳು ಮತ್ತು ಸಣ್ಣ ಕಡ್ಡಿಗಳನ್ನು ಬೆಂಕಿ ಹೊತ್ತಿಸಲು ಪ್ಪಳ್ಳಿಯಾಗಿ ಉಪ ಯೋಗಿಸಬಹುದು. ಅವುಗಳಿಗೆ ಬೇಗ ಬೆಂಕಿ ಹೊತ್ತಿಕೊಳ್ಳುತ್ತದೆ. ಆದರೆ ಅವು ಅಷ್ಟೇ ಬೇಗನೆ ಉರಿದು ಹೋಗುತ್ತವೆ. ದೊಡ್ಡ ಕಟ್ಟಿಗೆಗೆ ಬೆಂಕಿ ಹೊತ್ತುವುದು ನಿಧಾನ. ಆದರೆ

ಅವು ಹೆಚ್ಚು ಸಮಯ ಉರಿಯುತ್ತವೆ" ಅಂದ ಜಸ್ವಂತ್. "ರಾತ್ರಿಗೆ ಏನು ಅಡಿಗೆ ಮಾಡೋಣ?"

"ನಾವು ತಿಂದು ಮಿಕ್ಕಿರುವ ಕೆಲವು ಪರೋಟಾಗಳಿವೆ. ಬೇಕಾದರೆ ದಪ್ಪ ಆಲೂಗಡ್ಡೆಗಳನ್ನು ಬಿಸಿ ಬೂದಿಯಲ್ಲಿ ಬೇಯಿಸಿ ತಿನ್ನಬಹುದು. ಅವು ಬಲು ರುಚಿಯಾಗಿರುತ್ತವೆ" ಅಂದ ಕಪಿಲ್.

"ಒಳ್ಳೆಯ ಯೋಚನೆ" ಅಂದ ನವೀನ್. ಅವನು ಅಡಿಗೆ ಪಾತ್ರೆಯೊಂದನ್ನು ತಂದಿದ್ದ. ಕಪಿಲ್ ಕಲ್ಲುಗಳ ಕೆಳಗೆ ಒಂದು ಹಳ್ಳ ತೋಡಿದ. ಉರಿಯುತ್ತಿದ್ದ ದೊಡ್ಡ ಬೆಂಕಿಯಿಂದ, ಕೆಂಡವನ್ನು ತಂದು ಒಲೆಯೊಳಗಿಟ್ಟ. ನವೀನ್ ಅಡಿಗೆ ಪ್ರಾರಂಭಿಸಿದ.

ಮೈದಾನದಲ್ಲಿ ಬೆಂಕಿ ಚಟಪಟಗುಟ್ಟುತ್ತಿತ್ತು. ಜಸ್ವಂತ್ ಮೂರು ದಪ್ಪ ಆಲೂಗಡ್ಡೆಗಳನ್ನು ಬಿಸಿ ಬೂದಿಯ ಮೇಲೆ ಹಾಕಿದ.

ಮೂವರು ಹುಡುಗರು ಕೈಯಲ್ಲಿ ತಟ್ಟೆಯನ್ನು ಹಿಡಿದಿದ್ದರು. ಅವರವರೇ ಬಡಿಸಿಕೊಂಡರು. ಬೆಂದ ಬಿಸಿ ಆಲೂಗಡ್ಡೆ ರುಚಿಯಾಗಿತ್ತು. ಹೊಟ್ಟೆ ತುಂಬಿತು. ತಿಂದಾದ ಮೇಲೆ ಅವರು ಪಾತ್ರೆ ತಟ್ಟೆಗಳನ್ನು ಬೂದಿಯಿಂದ ಉಜ್ಜಿ ತೊಳೆದರು.

ಜಸ್ವಂತ್ ತನ್ನ ಜೇಬಿನಿಂದ ಒಂದು ಚಿಕ್ಕ 'ಮೌತ್ ಆರ್ಗನ್'ಅನ್ನು ತೆಗೆದ. ಅದರಿಂದ ಇಂಪಾದ ಪಹಾಡಿ ಗೀತೆಯೊಂದನ್ನು ಬಾರಿಸಿದ. ಬಳಿಕ ಸ್ಕೌಟ್ ಗೀತೆಗಳನ್ನು ಹಾಗೂ ಜನಪ್ರಿಯ ಸಿನಿಮಾ ಹಾಡುಗಳನ್ನೂ ನುಡಿಸಿದ. ಕಪಿಲ್ ಮತ್ತು ನವಿನ್ ಸಹ ಮಧ್ಯೆ ಮಧ್ಯೆ ಹಾಡುತ್ತಿದ್ದರು.





"ನವೀನ್‌ಗೆ ನಿದ್ರೆ ಬರುತ್ತಿದೆ ಅಂತ ಕಾಣುತ್ತದೆ" ಅಂದ ಕಪಿಲ್.

"ನಾವು ಈಗ ಮಲಗುವುದೇ ಉತ್ತಮ. ಮೊದಲು ಮೈದಾನದಲ್ಲಿ ಹಾಕಿರುವ ಬೆಂಕಿಯನ್ನು ಚೆನ್ನಾಗಿ ಆರಿಸಿಬಿಟ್ಟು ಬರುತ್ತೇನೆ" ಎಂದು ಜಸ್ವಂತ್ ಹೇಳಿದ.

ನವೀನ್ ಗುಡಿಸಲಿನತ್ತ ಹೋದ. ಇನ್ನೂ ಒಳಗೆ ಹೆಜ್ಜೆ ಇಟ್ಟಿರಲಿಲ್ಲ. ಕಿಟಾರನೆ ಚೀರಿದ. ತಕ್ಷಣ ಹಿಂದಕ್ಕೆ ಬಂದ. ತೆಳ್ಳಗೆ, ಉದ್ದನೆಯ ಆಕಾರದ ಯಾವುದೋ ಒಂದು ಪ್ರಾಣಿ ಇದ್ದ ಹಾಗಿತ್ತು. ಆ ಪ್ರಾಣಿ ನೆಗೆದು, ಕಪಿಲ್‌ನ ಪಕ್ಕದಲ್ಲಿ ಹಾದುಹೋಯಿತು. ಅಲ್ಲೇ ನಿಂತಿದ್ದ ಜಸ್ವಂತ್‌ನ ಮೇಲೆ ಹಾರಿ, ಮೈದಾನದ ಆಚೆ ಓಡಿ ಹೋಯಿತು.

"ಜಾಗ್ರತೆ" ಕಪಿಲ್ ಕೂಗಿದ.

"ಅದೇನದು?"

"ಚಿರತೆ!" ನವೀನ್ ಅರಚಿದ.

"ಅಲ್ಲ, ಅದು ನರಿ" ಕಪಿಲ್ ಕೂಗಿದ.

"ಅದು ನರಿಯೇ ಇರಬೇಕು" ಅಂದ ಜಸ್ವಂತ್. ಮೂವರು ಹುಡುಗರು ಹೊಟ್ಟೆ ಹುಣ್ಣಾಗುವಂತೆ ನಕ್ಕರು. ದೂರದ ಕಾಡಿನಲ್ಲಿ ನರಿ ಗೂಳಿಟ್ಟಿತು.

"ಒಳ್ಳೇ ಸ್ನೇಹಿತ ಕಣಯ್ಯ ನೀನು. ನಮ್ಮನ್ನು ಎಷ್ಟು ಹೆದರಿಸಿಬಿಟ್ಟೆ" ಅಂದ ಕಪಿಲ್.

"ನಾವು ಹೊರಗೆ ಹಾಡುತ್ತಾ ಇದ್ದಾಗ, ಆ ನರಿ ಚೂರು–ಪಾರು ಆಹಾರವನ್ನು ಹುಡುಕಿಕೊಂಡು ಗುಡಿಸಲನ್ನು ಹೊಕ್ಕಿರಬೇಕು" ಅಂದ ಜಸ್ವಂತ್. ಹುಡುಗರು ಮಲಗಿದರು. ಚೆನ್ನಾಗಿ ನಿದ್ರೆ ಮಾಡಿ ಎಂದು ಜಸ್ವಂತ್ ಹೇಳುತ್ತಿದ್ದಂತೆ ಕಪಿಲ್ ಮತ್ತು ನವೀನ್ ನಿದ್ರೆ ಮಾಡಿದ್ದರು.



# ಮಧ್ಯರಾತ್ರಿಯಲ್ಲಿ ಸಾಹಸ

ಸುಮಾರು ಮಧ್ಯ ರಾತ್ರಿ ಇರಬಹುದು. ನವೀನ್‌ಗೆ ಎಚ್ಚರವಾಯಿತು. ಏಕೆ ಎಚ್ಚರವಾಯಿತೋ ತಿಳಿಯದು. ಗುಡಿಸಿಲಿನಲ್ಲಿ ಕಗ್ಗತ್ತಲು. ಎಲ್ಲೆಲ್ಲೂ ನಿಶ್ಯಬ್ದ. ಜಸ್ವಂತ್ ಮತ್ತು ಕಪಿಲ್‌ಗೆ ಗಾಢ ನಿದ್ರೆ.

ನವೀನ್ ಎದ್ದು ಕುಳಿತ. ಕಿಂಚಿತ್ತೂ ಶಬ್ದವಿಲ್ಲ. ಒಂದು ಕಡ್ಡಿ ಕೂಡಾ ಅಲುಗಾಡುತ್ತಿರಲಿಲ್ಲ. "ಕೆಟ್ಟ ಕನಸು ಬಿದ್ದಿರಬೇಕು" ಅಂದುಕೊಂಡ.

ಅವನು ಪುನಃ ಮಲಗಿಕೊಳ್ಳ ಹೋದ. ದೂರದಿಂದ ಬಂದ ಅಸ್ಪಷ್ಟ ಕೂಗು ಅವನನ್ನು ಮಲಗ ಬಿಡಲಿಲ್ಲ. 'ಅ...ಯ್ಯೋ...ೀ...' ಎಂಬಂತಿತ್ತು ಆ ಕೂಗು. ಸಣ್ಣ ಏರುಧ್ವನಿ. ಅದು ಮನುಷ್ಯನ ಧ್ವನಿಯೋ ಅಥವಾ ಪ್ರಾಣಿಯ ಕೂಗೋ ಅವನಿಗೆ ತಿಳಿಯಲಿಲ್ಲ.

"ಜಸ್ವಂತ್ ! ಕಪಿಲ್ ! ಬೇಗನೆ ಎದ್ದೇಳಿ. ಯಾರೋ ಕರೆಯುತ್ತಿರುವ ಹಾಗಿದೆ" ನವೀನ್ ಚಡಪಡಿಸಿದ.

"ಏನದು?" ಎಂದು ಕೇಳುತ್ತಾ, ಜಸ್ವಂತ ತಟ್ಟನೆ ಎದ್ದ. "ನವೀನ್, ಚಳಿಯಲ್ಲಿ ಏಕೆ ಹಾಗೇ ನಿಂತಿದ್ದೀ? ಬೆಚ್ಚಗಿರುವ ಬಟ್ಟೆ ಹಾಕಿಕೊ" ಅಂದ.

"ಧ್ವನಿ ಕೇಳಿಸಿತೇ ಜಸ್ವಂತ್?"

"ಅ...ಯ್ಯೋ...ೀ..." ಪುನಃ ಎತ್ತರಿಸಿದ ಧ್ವನಿಯಲ್ಲಿ ಅದೇ ಕೂಗು. ಯಾರದೋ ಆರ್ತನಾದ.

ಜಸ್ವಂತ್ ಲಾಂದ್ರವನ್ನು ಹಚ್ಚಿದ. ನಿದ್ರೆಯಿಂದ ಸ್ವಲ್ಪ ಎಚ್ಚರಗೊಂಡ ಕಪಿಲ್, ಏನು ಮಾಡುತ್ತಿದ್ದೀರಿ?" ಎಂದು ಕೇಳಿದ.

"ಯಾರೋ ಸಹಾಯವನ್ನು ಕೇಳುತ್ತಿದ್ದಾರೆ. ನೀವಿಬ್ಬರೂ ಬೆಚ್ಚನೆಯ ಬಟ್ಟೆಗಳನ್ನು ಧರಿಸಿ. ಬೇಗ ಹೋಗೋಣ" ಅಂದ ಜಸ್ವಂತ್. ಮರುಕ್ಷಣದಲ್ಲೇ ಜಸ್ವಂತ್ ಟಾರ್ಚು ಹಗ್ಗ, ಮತ್ತು ಕೈಗೊಡಲಿಯನ್ನು ತೆಗೆದುಕೊಂಡ. ಕಪಿಲ್ ಮತ್ತು ನವೀನ್ ಪ್ರಥಮ ಚಿಕಿತ್ಸೆ ಸಲಕರಣೆಗಳು ಮತ್ತು ಇತರ ಸಾಮಾನುಗಳನ್ನು ತೆಗೆದುಕೊಂಡರು.

"ಅ...ಯ್ಯೋ...ೀ..." ಪುನಃ ಅದೇ ಸ್ವರ.

ಕೆಲವೇ ನಿಮಿಷಗಳಲ್ಲಿ ಹುಡುಗರು ಅಲ್ಲಿಂದ ಹೊರಟರು. ನವೀನ್ ಲಾಂಧ್ರವನ್ನು ಹಿಡಿದುಕೊಂಡಿದ್ದ.

"ಮೊದಲು ಶಬ್ದ ಯಾವ ದಿಕ್ಕಿನಿಂದ ಬರುತ್ತಿದೆ ಎಂಬುದನ್ನು ತಿಳಿದುಕೊಳ್ಳೋಣ" ಜಸ್ವಂತ್ ಹೇಳಿದ.

"ಅ...ಯ್ಯೋ...ೀ..." ಮತ್ತೊಮ್ಮೆ ಕೂಗು. ಈ ಕೂಗು ಮೈದಾನದ ತುಟ್ಟತುದಿಯಿಂದ ಬರುವಂತೆ ಅವರಿಗೆ ಕಂಡಿತು. ಅದೇ ದಿಕ್ಕಿನತ್ತ ಹೊರಟರು. ಚಂದ್ರನ ಬೆಳಕು



ಪ್ರಕಾಶಮಾನವಾಗಿತ್ತು. ರಸ್ತೆ ಚೆನ್ನಾಗಿ ಕಾಣಿಸುತ್ತಿತ್ತು. ಅವರು ಬೆಟ್ಟದ ತುಟ್ಟತುದಿಗೆ ಬಂದರು. ಮುಂದೇನೂ ಇರಲಿಲ್ಲ. ಕೆಳಗೆ ಪ್ರಪಾತ. ತುದಿಯಲ್ಲಿ ಒಂದಿಷ್ಟು ಪೊದೆಗಳು ಬೆಳೆದಿದ್ದುವು. ಅಲ್ಲಿ ಮತ್ತೇನೂ ಕಾಣಿಸಲಿಲ್ಲ.

"ಹೋ! ಯಾರಿರುವುದು? ನೀವು ಯಾರು?" ಎಂದು ಜಸ್ವಂತ್ ಜೋರಾಗಿ ಕೂಗಿದ.

"ಇಲ್ಲಿದ್ದೇನೆ, ಕೆಳಗೆ ಬನ್ನಿ" ಎಂದು ಪಾತಾಳದಿಂದ ಕೂಗಿದ ಹಾಗಾಯಿತು. ಜಸ್ವಂತ್ ದೇಕಿಕೊಂಡು ಬೆಟ್ಟದ ತುಟ್ಟತುದಿಯ ವರೆಗೂ ಹೋದ. ಅಲ್ಲಿಂದ ಕೆಳಗೆ ಬೆಳಕು ಬಿಟ್ಟ. ಕಪಿಲ್ ಸಹ ಪಕ್ಕದಲ್ಲೇ ಬೋರಲಾಗಿ ಮಲಗಿಕೊಂಡು ಟಾರ್ಚ್ ಬಿಟ್ಟು ನೋಡಿದ.

"ಅಲ್ಲಿ ನೋಡು ಜಸ್ವಂತ್. ಕೆಳಗಿನ ಬಂಡೆಯ ಮೇಲೆ ಒಬ್ಬ ಹುಡುಗ ಕಾಣಿಸುತ್ತಿದ್ದಾನೆ" ಅಂದ ಕಪಿಲ್.

ಬೆಟ್ಟದ ತುದಿಯಿಂದ ಹದಿನೈದು ಅಡಿಗಳ ಕೆಳಗೆ ಒಂದು ಚಾಚುಬಂಡೆ. ಅದರ ಮೇಲೆ ಬೆಳಕಿನ ಕಿರಣಗಳು ಬಿದ್ದವು. ಕುರಿಕಾಯುವ ಹುಡುಗನೊಬ್ಬ ಬಂಡೆಯ ಮೇಲೆ ಮುದುಡಿಕೊಂಡು ಕುಳಿತಿದ್ದ. ಅವನು ಕೈಯಲ್ಲಿ ಏನನ್ನೋ ಹಿಡಿದುಕೊಂಡಿದ್ದ.

"ಅಲ್ಲೇ ಇರು, ಹೆದರಬೇಡ. ನಾವು ನಿನ್ನನ್ನು ಬೇಗನೆ ಮೇಲೆ ಕರೆದೊಯ್ಯುತ್ತೇವೆ" ಅಂದ ಜಸ್ವಂತ್.

"ನಿನ್ನ ಕೈಲಿರುವುದೇನು?" ಕಪಿಲ್ ಕೇಳಿದ.

"ಅದು ಕುರಿಮರಿ. ದಯವಿಟ್ಟು ಸಹಾಯ ಮಾಡಿ" ಎಂದು ಹುಡುಗ ಅಳುತ್ತಾ ಅಂಗಲಾಚಿದ.

ಜಸ್ವಂತ್ ಹಗ್ಗದ ಸುರುಳಿಯನ್ನು ಬಿಚ್ಚಿದ. "ಹುಡುಗನೇ, ಆ ಬಂಡೆಯ ಮೇಲೆ ಇನ್ನೊಬ್ಬರು ನಿಂತುಕೊಳ್ಳುವಷ್ಟು ಜಾಗವಿದೆಯೇ?" ಎಂದು ಕೇಳಿದ.

"ಬಹಳ ಸ್ವಲ್ಪ" ಹುಡುಗ ಉತ್ತರಿಸಿದ.

"ಜಸ್ವಂತ್ ನಾನು ಕೆಳಗೆ ಹೋಗುತ್ತೇನೆ. ನೀನಾದರೆ ಹಗ್ಗವನ್ನು ಸುಲಭವಾಗಿ ಹಿಡಿದುಕೊಳ್ಳಬಹುದು" ಅಂದ ಕಪಿಲ್.

"ಹಾಗಾದರೆ ಸರಿ. ಹಗ್ಗವನ್ನು ನಿನ್ನ ಸೊಂಟಕ್ಕೆ ಬಿಗಿಯುತ್ತೇನೆ. ನವೀನ್ ನೀನು ತುದಿಯಲ್ಲಿ ಲಾಂದ್ರದಿಂದ ಬೆಳಕು ತೋರಿಸು. ಕಪಿಲ್ ನೆನಪಿನಲ್ಲಿಟ್ಟುಕೊ. ಹಗ್ಗವನ್ನು ಎರಡು ಕೈಗಳಿಂದ ಬಿಗಿಯಾಗಿ ಹಿಡಿದುಕೊ. ಕಾಲುಗಳನ್ನು ಬೆಟ್ಟದ ಕಡೆ ಇಟ್ಟುಕೊಂಡು. ಹುಷಾರಾಗಿ ಇಳಿ. ನಾನು ನಿಧಾನವಾಗಿ ಹಗ್ಗವನ್ನು ಬಿಡುತ್ತೇನೆ"— ಅಂದ ಜಸ್ವಂತ್.

ಬೂಟುಗಳನ್ನು ತೆಗೆದಿಡುವಂತೆ ನವೀನ್ ಕಪಿಲ್‌ಗೆ ಸಲಹೆ ಮಾಡಿದ.

# ಬಿಡುಗಡೆ

ಗಾಳಿ ಜೋರಾಗಿ ಬೀಸುತ್ತಿತ್ತು. ಚಂದ್ರ ಮೋಡದ ಹಿಂದೆ ಮರೆಯಾಗಿದ್ದ. ಕಪಿಲ್ ಹಗ್ಗವನ್ನು ಹಿಡಿದು, ಬೆಟ್ಟದ ತುದಿಯಿಂದ ನಿಧಾನವಾಗಿ ಕೆಳಗೆ ಇಳಿದ. ಅವನಿಗೆ ಜಸ್ವಂತ್ ಎರಡು ಕೈಗಳಲ್ಲೂ ಹಿಡಿದಿದ್ದ ಹಗ್ಗವನ್ನು ಸ್ವಲ್ಪ ಸ್ವಲ್ಪವಾಗಿ ಬಿಡುತ್ತಾ ಹೋದ.

ಕಪಿಲ್ ನಿರಾತಂಕವಾಗಿ ಕೆಳಗಿಳಿಯುತ್ತಿದ್ದಾನೆಂಬುದನ್ನು ಅವನು ಖಚಿತಪಡಿಸಿಕೊಂಡ.

"ಇನ್ನು ಮೂರು ಅಡಿಗಳಷ್ಟು ಕೆಳಗಿಳಿದರೆ, ತಳ ಸಿಗಬಹುದು" ಎಂದು ಅವನು ನುಡಿದ. ಹಾಗೆ ಹೇಳಿದ ಕೆಲವೇ ಕ್ಷಣದಲ್ಲಿ, ಕಪಿಲ್ ಬಂಡೆಯ ಮೇಲೆ ಬಂದಿಳಿದ.

ಬಂಡೆಯ ಮೇಲೆ ಕುಳಿತ್ತಿದ್ದ ಹುಡುಗನ ವಯಸ್ಸು ಸುಮಾರು ಹತ್ತು ವರ್ಷಗಳಿರ ಬಹುದು.

"ನೀನು ವ್ಯಾಸ್ ಅವರ ಮನೆಯ ನೌಕರ ಜಯದೇವನ ಮಗನಲ್ಲವೇ?" ಎಂದು ಕಪಿಲ್ ಕೇಳಿದ.

"ಹೌದು. ನನ್ನ ಹೆಸರು ಧಾನು. ಕುರಿಯನ್ನು ಕಳೆದರೆ, ನಮ್ಮ ತಂದೆ ನನ್ನನ್ನು ಹೊಡೆಯುತ್ತಾರೆ. ಅದಕ್ಕಾಗಿ ನಾನು ಹೆದರಿ ಎಷ್ಟೋ ಗಂಟೆಗಳಿಂದ ಇಲ್ಲೇ ಇದ್ದೇನೆ" ಎಂದು ಹುಡುಗ ಬಿಕ್ಕಿಬಿಕ್ಕಿ ಅಳುತ್ತಾ ತಿಳಿಸಿದ.

"ಧಾನು ಅಳಬೇಡ. ನಿನಗೇನೂ ಅಪಾಯವಿಲ್ಲ. ನಿನ್ನ ಕುರಿಯೂ ಸುರಕ್ಷಿತವಾಗಿದೆ. ಯೋಚಿಸಬೇಡ" ಎಂದು ಕಪಿಲ್ ಸಮಾಧಾನ ಹೇಳಿದ.

ಒಂದು ನಿಮಿಷದ ಬಳಿಕ ಕಪಿಲ್ ಜಸ್ವಂತ್‌ನನ್ನು ಕೂಗಿ, "ನೀನು ಹುಡುಗನನ್ನು ಮೇಲೆ ಎಳೆದುಕೊಳ್ಳಲು ಸಾಧ್ಯವಿಲ್ಲ. ಅವನ ತೋಳು ಗಾಯವಾಗಿದೆ" ಅಂದ.

"ಹಾಗಾದರೆ ನೀನು ಏನೂ ಮಾಡಬೇಡ. ಸ್ವಲ್ಪ ಯೋಚಿಸಿ ಹೇಳುತ್ತೇನೆ" ಅಂದ ಜಸ್ವಂತ್.

"ನಂತರ ಹೇಳಿದ: "ನೀನು ಸ್ವಲ್ಪ ಗಮನವಿಟ್ಟು ಕೇಳು

ಕುರಿಮರಿ ಬಹಳ ದೊಡ್ಡದಿದೆಯೇ?"

"ಅಷ್ಟೇನೂ ದೊಡ್ಡದಲ್ಲ."

"ನಿನ್ನ ಬಳಿ ಹಗ್ಗವಿದೆಯೇ?"

"ಹೌದು ಇದೆ."

"ಚಿಕ್ಕ ಚಾಕು?"

"ಇದೆ."

"ಕುರಿಮರಿಯ ಹಿಂದಿನ ಕಾಲುಗಳನ್ನು ಮತ್ತು ಮುಂದಿನ ಕಾಲುಗಳನ್ನು ಹಗ್ಗದಿಂದ ಕಟ್ಟಲು ನಿನಗೆ ಸಾಧ್ಯವೇ?"

"ಪ್ರಯತ್ನಿಸಿ ನೋಡುತ್ತೇನೆ."

ಕಪಿಲ್ ತನ್ನ ಕೈಚಾಕುವನ್ನು ತೆಗೆದು ಒಂದಿಷ್ಟು ಹುರಿಯನ್ನು ಕತ್ತರಿಸಿಕೊಂಡ. ಕಾಲುಗಳಿಗೆ ಹುರಿಯನ್ನು ಕಟ್ಟುವಾಗ ಕುರಿಮರಿ ಬಹಳ ಗಾಬರಿಗೊಂಡಿತು. ಅದರ ಕಾಲುಗಳನ್ನು ಕಟ್ಟುವುದಕ್ಕೆ ಧಾನು ಸಹಾಯ ಮಾಡಿದ.

"ಕಾಲಿಗೆ ಹುರಿ ಕಟ್ಟಿಯಾಯಿತು" ಕಪಿಲ್ ಕೂಗಿದ.

"ಈಗ ಕುರಿಮರಿಯನ್ನು ನಿನ್ನ ಹೆಗಲಿಗೆ ಹಾಕಿಕೊ" ಅಂದ ಜಸ್ವಂತ್

ಕುರಿಮರಿ ಸಾಕಷ್ಟು ಭಾರವಿತ್ತು. ಬಂಡೆಯು ಅಗಲ ಕಿರಿದಾಗಿತ್ತು. ಕುರಿಮರಿಯನ್ನು ಹೆಗಲಿಗೆ ಹಾಕಿಕೊಳ್ಳುವಾಗ ಕಪಿಲ್ ಬಂಡೆಯಿಂದ ಜಾರುವ ಸಂಭವವಿತ್ತು.



"ಕಪಿಲ್, ನಿನ್ನ ಬಳಿ ಇನ್ನೂ ಸ್ವಲ್ಪ ಹುರಿ ಅಥವಾ ಅಂಗವಸ್ತ್ರವಿದೆಯಾ? ಕುರಿಮರಿಯ ಮುಂಗಾಲಿನಿಂದ ಕಟ್ಟಿ ನೀನು ಕುರಿಯನ್ನು ನೇತು ಹಾಕಿಕೊಳ್ಳಬಹುದು."

ಧಾನು ತಲೆಗೆ ಸುತ್ತಿದ್ದ ಬಟ್ಟೆಯನ್ನು ಕಪಿಲ್ ತೆಗೆದುಕೊಂಡ. ಅದನ್ನು ಮೊದಲು ಕುರಿಯ ಹಿಂಗಾಲುಗಳಿಗೆ ನಂತರ ಮುಂಗಾಲುಗಳಿಗೆ ಬಿಗಿಯಾಗಿ ಕಟ್ಟಿದ. ಅನಂತರ ಮಫ್ಲರ್‌ಅನ್ನು ಹಾಕಿಕೊಳ್ಳುವಂತೆ ಕುರಿಮರಿಯನ್ನು ತನ್ನ ಕುತ್ತಿಗೆಗೆ ನೇತು ಹಾಕಿಕೊಂಡ.

"ನಾನು ಸಿದ್ಧ" ಎಂದು ಕೂಗಿಕೊಂಡ

"ಈಗ ನೀನು ಹಗ್ಗವನ್ನು ಬಿಗಿಯಾಗಿ ಹಿಡಿದುಕೊ. ನಾನು ಹಗ್ಗವನ್ನು ಮೇಲೆ ಎಳೆದುಕೊಳ್ಳುತ್ತೇನೆ" ಅಂದ ಜಸ್ವಂತ್.

"ನಿಧಾನವಾಗಿ ಮೇಲಕ್ಕೆ ಬಾ. ಕೆಳಗೆ ನೋಡಬೇಡ" ಮತ್ತೊಮ್ಮೆ ಎಚ್ಚರಿಕೆ ಕೊಟ್ಟ. ಕೆಳಗೆ ಹಗ್ಗವನ್ನು ಬಿಟ್ಟದ್ದಕ್ಕಿಂತ ಮೇಲೆ ಎಳೆದುಕೊಳ್ಳುವುದು ಜಸ್ವಂತ್‌ಗೆ ತುಂಬ ಪ್ರಯಾಸವಾಗಿ ಕಂಡಿತು. ಹಗ್ಗದ ತುಯಿತದಿಂದ ಅವನ ಕೈ ಚರ್ಮ ಸುಲಿಯಿತು.

ಹಾಗೂ ಹೀಗೂ ಕಪಿಲ್ ಪ್ರಯಾಸದಿಂದ ಮೇಲೆ ಬಂದ. ಅವನನ್ನು ಮೇಲೆಳೆದು ಕೊಳ್ಳಲು ನವೀನ್ ನೆರವಾದ. ಮೇಲ್‌ತುದಿಗೆ ಬರುವ ಹೊತ್ತಿಗಾಗಲೇ ಕಪಿಲ್‌ಗೆ ಉಸಿರು ಸಿಕ್ಕಿಕೊಂಡಂತಾಗಿತ್ತು. ಜಸ್ವಂತ್ ಕುರಿಮರಿಯನ್ನು ಅವನ ಭುಜದಿಂದ ಹೊರ ತೆಗೆದ.

"ಅಬ್ಬಾ, ದೇವರ ದಯೆ. ಸ್ವಲ್ಪ ತಡವಾಗಿದ್ದಿದ್ದರೆ, ಈ ಕುರಿಮರಿಯಿಂದಾಗಿ ನನ್ನ ಕತ್ತು ಹಿಚುಕಿಹೋಗುತ್ತಿತ್ತು" ಅಂದ ಕಪಿಲ್. ಹಾಗೆ ಹೇಳುತ್ತಾ ಒಮ್ಮೆ ತನ್ನ ಕತ್ತನ್ನು ಅವನು ಉಜ್ಜಿಕೊಂಡ. "ಈಗ ಧಾನುವನ್ನು ಮೇಲಕ್ಕೆತ್ತುವ ಬಗೆ ಹೇಗೆ?" ಎಂದು ಅವನು ಜಸ್ವಂತ್‌ನನ್ನು ಕೇಳಿದ.

ಜಸ್ವಂತ್ ಹಗ್ಗದ ಒಂದು ತುದಿಯನ್ನು ಒಂದು ಮರಕ್ಕೆ ಬಿಗಿಯಾಗಿ ಕಟ್ಟಿದ. "ಧಾನು, ಈ ಹಗ್ಗವನ್ನು ನಾನು ಕೆಳಗೆ ಬಿಡುತ್ತೇನೆ. ಅದು ಕೆಳಗೆ ಬಂದಾಗ ಅದರ ತುದಿಯನ್ನು ಹಿಡಿದುಕೊ" ಎಂದು ಮೇಲಿನಿಂದ ಜೋರಾಗಿ ಕೂಗಿದ.

ಹಗ್ಗ ಕೆಳಗೆ ಬಂದ ಕೂಡಲೇ ಧಾನು ಅದರ ತುದಿಯನ್ನು ಹಿಡಿದ.

"ಈಗ ಹಗ್ಗವನ್ನು ಬಿಡು. ನಾನು ಕೆಳಗಿಳಿದು ಬಂದು ನಿನ್ನನ್ನು ಮೇಲೆ ಕರೆದೊಯ್ಯು ತ್ತೇನೆ" ಅಂದ ಜಸ್ವಂತ್.

ಅವನು ಕಪಿಲ್‌ನಿಂದ ಧಾನುವಿನ ತಲೆಗೆ ಸುತ್ತುವ ಬಟ್ಟೆಯನ್ನು ತೆಗೆದುಕೊಂಡ. ತನ್ನ ಬೂಟುಗಳನ್ನು ಎಸೆದು, ಹಗ್ಗವನ್ನು ಹಿಡಿದುಕೊಂಡು ನಿಧಾನವಾಗಿ ಇಳಿಯಲಾರಂಭಿಸಿದ.

ಕಪಿಲ್ ಮತ್ತು ನವೀನ್ ಕುರಿಮರಿ ಮತ್ತು ಟಾರ್ಚುಗಳನ್ನಲ್ಲದೇ ತಮ್ಮ ಉಸಿರನ್ನು ಸಹ ಬಿಗಿಯಾಗಿ ಹಿಡಿದು ಕುಳಿತಿದ್ದರು.

ಹಠಾತ್ತನೆ ಜಸ್ವಂತ್‌ಗೆ ತನ್ನ ಕಾಲಿನ ಹಿಡಿತ ತಪ್ಪಿತು. ಹಗ್ಗವನ್ನು ಹಿಡಿದು ಜೋತಾಡ ತೊಡಗಿದ. ಹಗ್ಗದ ತುಯ್ಯುತ ಹೆಚ್ಚಿತು.

ಕಪಿಲ್ ಕುರಿಮರಿಯನ್ನು ನವೀನ್‌ನ ಕೈಗೆ ಕೊಟ್ಟ. ಹಗ್ಗದ ತುಯ್ದಾಟವನ್ನು ತಡೆಯಲು ಮರದ ಬಳಿ ಹಗ್ಗವನ್ನು ಕೈಗಳಲ್ಲೂ ಭದ್ರವಾಗಿ ಹಿಡಿದು ಕೂತ.

ಸ್ವಲ್ಪ ಹೊತ್ತಿನಲ್ಲೇ ಜಸ್ವಂತ್ ಧಾನುವಿನ ಬಳಿ ಆಗಮಿಸಿದ.

"ಧಾನು, ನೀನು ತುಂಬ ಧೈರ್ಯವಂತ. ಈಗ ನೀನು ನಿನ್ನ ಧೈರ್ಯವನ್ನು ಮತ್ತಷ್ಟು ಹೆಚ್ಚಾಗಿತೋರಿಸಬೇಕು. ನೀನು ನನ್ನ ಬೆನ್ನಿನ ಮೇಲೆ ಹತ್ತು. ಗಾಯವಿಲ್ಲದ ತೋಳಿನಿಂದ ನನ್ನ ಸೊಂಟವನ್ನು ಬಳಸು. ಆದರೆ ಕೈಯನ್ನು ಬಲವಾಗಿ ಹಿಡಿದುಕೊ. ನಿನ್ನನ್ನು ನಾನು ನನ್ನ ಬೆನ್ನಿಗೆ ಕಟ್ಟಿಕೊಳ್ಳುತ್ತೇನೆ" ಎಂದು ತಲೆಗೆ ಸುತ್ತುವ ಬಟ್ಟೆಯಿಂದ ಜಸ್ವಂತ್, ಧಾನುವನ್ನು ತನ್ನ ಬೆನ್ನಿನ ಮೇಲೆ ಕೂರಿಸಿಕೊಂಡು ಬಿಗಿಯಾಗಿ ಕಟ್ಟಿಕೊಂಡ.

"ಸ್ವಲ್ಪ ನೋವಾಗಬಹುದು. ಆದರೂ ಬೀಳದ ಹಾಗೆ ನೋಡಿಕೊಳ್ಳಬೇಕು" ಎಂದು ಜಸ್ವಂತ್, ಧಾನುವನ್ನು ಎಚ್ಚರಿಸಿದ.

ಜಸ್ವಂತ್ ಹೇಳಿದ್ದನ್ನು ಪಾಲಿಸುವುದಾಗಿ ಧಾನು ಭರವಸೆ ಕೊಟ್ಟ.

ಜಸ್ವಂತ್ ಮೇಲೇರಲಾರಂಭಿಸಿದ. ಎಚ್ಚರಿಕೆಯಿಂದ ಒಂದಾದ ಮೇಲೊಂದು ಹೆಜ್ಜೆ ಇಟ್ಟುಕೊಂಡು, ಕೈಯ್ಯಾದ ಮೇಲೆ ಕೈ ಬದಲಾಯಿಸಿಕೊಂಡು ಸಾವಧಾನವಾಗಿ ಮೇಲಕ್ಕೆ ಹತ್ತುತ್ತಿದ್ದ. ಧಾನು ಅಷ್ಟೇನೂ ತೂಕವಿರಲಿಲ್ಲ. ಆದರೂ ಜಸ್ವಂತ್‌ನಂತಹ ಚಿಕ್ಕ ಹುಡುಗನಿಗೆ ಆ ತೂಕ ಹೆಚ್ಚೆಂದೇ ಹೇಳಬೇಕು. ಧಾನು ನೋವು ಅನುಭವಿಸುತ್ತಿದ್ದಾನೆಂಬುದು ಜಸ್ವಂತನಿಗೆ ತಿಳಿದಿತ್ತು. ಆ ಹುಡುಗ ಮೌನವಾಗಿಯೇ ನೋವು ಸಹಿಸಿಕೊಂಡಿದ್ದ.

ಸ್ವಲ್ಪ ಸ್ವಲ್ಪವಾಗಿ ಮೇಲೇರಿ ಜಸ್ವಂತ್ ಬೆಟ್ಟದ ತುದಿಯನ್ನು ತಲುಪಿದ. ಆ ಹುಡುಗನ ರಕ್ಷಣೆಗಾಗಿ ಮೂವರು ಹುಡುಗರು ಅದ್ಭುತ ಸಾಹಸ ಮಾಡಿದರು. ಜಸ್ವಂತ್ ಮೇಲೆ ಬಂದು ದೊಪ್ಪನೆ ಬಿದ್ದ. ಕಪಿಲ್ ಮತ್ತು ನವೀನ್ ಒಬ್ಬರ ಮೇಲೊಬ್ಬರು ಬಿದ್ದರು. ಕುರಿಮರಿ 'ಬ್ಯಾ' ಎಂದು ಅರಚಿತು.

ಅಲ್ಲಿಂದ ಎಲ್ಲರೂ ಮರಳಿ ಕುರುಬನ ಗುಡಿಸಲಿಗೆ ಹೊರಟರು. ಆ ವೇಳೆಗೆ ಹಕ್ಕಿಗಳು ಚಿಲಿಪಿಲಿಗುಟ್ಟಲಾರಂಭಿಸಿದ್ದವು. ಜಸ್ವಂತ್ ಧಾನುವನ್ನು ಗುಡಿಸಿಲೊಳಗೆ ಕರೆದೊಯ್ದು "ಈ ಹುಡುಗನಿಗೆ ತುಂಬ ಹಸಿವಾಗಿರಬೇಕು" ಎಂದು ನವೀನ್‌ಗೆ ಹೇಳಿದ.

ಬಳಲಿ ಬೆಂಡಾಗಿದ್ದ ಮತ್ತು ಹಸಿವಿನಿಂದ ಸೊರಗುತ್ತಿದ್ದ ಹುಡುಗನಿಗೆ ನವೀನ್ ಒಂದು ಬಟ್ಟಲು ಬಿಸಿ ಹಾಲು ಕೊಟ್ಟು ಉಪಚರಿಸಿದ.



ಜಸ್ವಂತ್ ತನ್ನ ಚೀಲದಿಂದ ಒಂದು ಸ್ವೆಟರ್‌ಅನ್ನು ಹೊರತೆಗೆದ. ಧಾನು ತಳ್ಳಗಿರುವ ಬಟ್ಟೆಯನ್ನು ಹಾಕಿಕೊಂಡಿದ್ದ. ಅವನ ಪೈಜಾಮು ಹರಿದಿತ್ತು. ಗಾಯವಾಗಿದ್ದ ಧಾನುವಿನ ಕೈಗೆ ಜಸ್ವಂತ್ ಒಂದು ಬಟ್ಟೆಯನ್ನು ಕಟ್ಟಿದ. ತನ್ನ ಸ್ವೆಟರ್‌ಅನ್ನು ಅವನಿಗೆ ಹಾಕಿದ. ಅದು ಅವನಿಗೆ ಬಹಳ ಸಡಿಲವಾಗಿದ್ದು ಅವನ ಮಂಡಿಯ ಕೆಳಗಿನ ವರೆಗೆ ಬರುತ್ತಿತ್ತು. ಇದ್ದಕ್ಕಿದ್ದಂತೆ ಕುರಿಮರಿ ಅರಚಿತು. ಕಪಿಲ್ ಅದರ ಕಾಲುಗಳಿಗೆ ಬಿಗಿದಿದ್ದ ಹುರಿಯನ್ನು ಬಿಚ್ಚಿದ. ಉಳಿದಿದ್ದ ಸ್ವಲ್ಪ ಹಾಲನ್ನು ಕುರಿಮರಿಯ ಮುಂದಿಟ್ಟ.

ಧಾನು ಹಾಲು ಕುಡಿದ. ಹುಡುಗರನ್ನು ನೋಡಿ ಮುಗುಳ್ನಕ್ಕ. ಹಾಗೇ ನಿದ್ರಿಸ ಲಾರಂಭಿಸಿದ.

ಚೆನ್ನಾಗಿ ಬೆಳಕು ಹರಿಯಿತು. ಹಕ್ಕಿಗಳೆಲ್ಲ ಎಚ್ಚರಗೊಂಡು ಒಟ್ಟಿಗೆ ಚಿಲಿಪಿಲಿಗುಟ್ಟಿದವು. ಜೀವನದಲ್ಲಿ ರಮ್ಯವಾದ ಮತ್ತೊಂದು ದಿನ ಉದಯಿಸಿತು.

# ಮರಳಿ ಮನೆಗೆ

ಒಂದೆರಡು ಗಂಟೆಗಳು ಕಳೆದುವು. ಧಾನುವನ್ನು ಎಬ್ಬಿಸಿಕೊಂಡು ಹುಡುಗರೆಲ್ಲರೂ ಒಟ್ಟಿಗೆ ಹೊರಟರು. ದಾರಿಯುದ್ದಕ್ಕೂ ಧಾನು ತನ್ನ ಕತೆಯನ್ನು ಹೇಳಿಕೊಂಡ.

"ನಾನು ಮತ್ತು ನಾಥುರಾಂ ಇಬ್ಬರೂ ಒಟ್ಟಿಗೆ ಕುರಿ ಮೇಯಿಸುತ್ತಿದ್ದೆವು. ನಾವು ಹಿಂತಿರುಗಿದಾಗ ಈ ಕುರಿಮರಿ ನಾಪತ್ತೆ ಆಗಿತ್ತು. ಹಿಂದೊಮ್ಮೆ ಒಂದು ಕುರಿ ತಪ್ಪಿಸಿಕೊಂಡಿದ್ದಾಗ ಶ್ರೀ ವ್ಯಾಸ್ ಅವರು ಸಿಡಿಮಿಡಿಗೊಂಡಿದ್ದರು. ಆದ್ದರಿಂದ ಈ ಸಲ ನಾಥುವಿಗೆ ಹೇಳದೆ ಕುರಿಮರಿಯನ್ನು ಹುಡುಕಿಕೊಂಡು ಹಿಂದಕ್ಕೆ ಓಡಿದೆ. ಅದು ಅರಚುತ್ತಿದ್ದ ಶಬ್ದವನ್ನೇ ಅನುಸರಿಸಿಕೊಂಡು ಹೋದೆ. ಅದು ಕೆಳಗಿನ ಬಂಡೆಯ ಮೇಲೆ ಕುಳಿತಿತ್ತು. ಆದರೆ ಪುನಃ ಮೇಲಕ್ಕೆ ಬರಲು ಅದಕ್ಕೆ ಸಾಧ್ಯವಿರಲಿಲ್ಲ."

"ಅಷ್ಟೊಂದು ಪಾತಾಳದಲ್ಲಿದ್ದ ಬಂಡೆಯ ಬಳಿ ನೀನು ಹೋದದ್ದಾದರೂ ಹೇಗೆ?" ಕಪಿಲ್ ಆಶ್ಚರ್ಯದಿಂದ ಕೇಳಿದ.

"ಹೇಗೆ ಹೋದೆನೋ ನನಗೇ ತಿಳಿಯದು. ನಮ್ಮ ತಂದೆ ಹೊಡೆಯುವರೆಂಬ ಭಯದಿಂದ ಕುರಿಮರಿಯನ್ನು ಬಿಟ್ಟು ಮನೆಗೆ ಹಿಂತಿರುಗುವುದಿಲ್ಲವೆಂದುಕೊಂಡೆ. ಕೆಳಗೆ ಹೋದ ಮೇಲೆ ಮೇಲಕ್ಕೆ ಬರಲಾಗಲಿಲ್ಲ. ನನಗೆ ಏನೂ ತೋಚಲಿಲ್ಲ. ಹಾಗೆಯೇ ಕತ್ತಲಾಯಿತು. ಕತ್ತಲೆ ಕವಿಯುತ್ತಿದ್ದಂತೆ ನನ್ನ ಹೆದರಿಕೆ ಮತ್ತಷ್ಟು ಹೆಚ್ಚಿತು.

ದೂರದಲ್ಲಿ ಜಯದೇವ ಮತ್ತು ನಾಥು ದೊಣ್ಣೆಗಳನ್ನು ಹಿಡಿದು ಹೋಗುತ್ತಿದ್ದರು. ಇದು ಹುಡುಗರ ಕಣ್ಣಿಗೆ ಬಿತ್ತು.



ಹುಡುಗರ ಗುಂಪಿನಲ್ಲಿ ಧಾನು ಇದ್ದುದನ್ನು ಅವರೂ ಸಹ ದೂರದಿಂದಲೇ ನೋಡಿದರು. "ದೇವರು ದೊಡ್ಡವನು. ಹುಡುಗ ನಿಮ್ಮ ಕೈಗೆ ಸಿಕ್ಕಿದ್ದು ಪುಣ್ಯ. ನಮ್ಮ ಚಿಂತೆ ಬಗೆಹರಿಯಿತು" ಎಂದು ಅವರು ಕೂಗಿ ಹೇಳಿದರು.

"ಅಪ್ಪ, ಈ ಹುಡುಗರು ನನ್ನ ಜೀವ ಉಳಿಸಿದರು. ಅಷ್ಟೇ ಅಲ್ಲದೇ ನನ್ನ ಕುರಿಮರಿಯನ್ನೂ ಕಾಪಾಡಿದರು" ಅಂದ ಧಾನು.

"ತುಂಟ ಹುಡುಗ" ಎಂದು ಜಯದೇವ ಹುಡುಗನನ್ನು ಬೈಯ್ಯತೊಡಗಿದ. ಆದರೆ ಜಸ್ವಂತ್ ಮಧ್ಯೆ ಬಂದು ಹೇಳಿದ:



"ಈ ಹುಡುಗನನ್ನು ನೀನು ಬೈಯ್ಯಬಾರದು. ನಿನ್ನ ಮಗ ಬಹಳ ಧೈರ್ಯಶಾಲಿ. ಅವನ ಕೈ ಗಾಯವಾಗಿದೆ. ಅವನನ್ನು ನಾವು ವೈದ್ಯರ ಬಳಿ ಕರೆದೊಯ್ಯಬೇಕು."

ನಾಪತ್ತೆಯಾಗಿರುವ ಹುಡುಗನ ಬಗ್ಗೆ ಏನು ಸುದ್ದಿ ಬರುವುದೋ ಎಂದು ಕುರಿಸಾಕಣೆ ಕ್ಷೇತ್ರದಲ್ಲಿ ಶ್ರೀ ವ್ಯಾಸ್ ಅವರು ಕಾತುರದಿಂದ ಎದುರುನೋಡುತ್ತಿದ್ದರು. ಧಾನುವನ್ನು ಕಂಡ ಕೂಡಲೇ ಸಿಮ್ಲಾದ ಆಸ್ಪತ್ರೆಗೆ ಕರೆದೊಯ್ಯಲು ಅವರು ಏರ್ಪಾಟು ಮಾಡಿದರು.

“ನೀವು ಸ್ಕೌಟ್‌ಗಳಾಗಿರುವುದರಿಂದ ನಮಗೆ ಎಷ್ಟು ದೊಡ್ಡ ಉಪಕಾರವಾಯಿತು! ನೀವು ಪಡೆದಿರುವ ಸ್ಕೌಟ್ ತರಬೇತಿಯಿಂದ ಒಬ್ಬ ಹುಡುಗನ ಜೀವವನ್ನೇ ಉಳಿಸಿದಿರಿ. ಕಪಿಲ್, ನೀವೆಲ್ಲ ಸೇರಿ ನಿಮ್ಮ ಚಿಕ್ಕಪ್ಪನಿಗೆ ಹೆಮ್ಮೆಯನ್ನು ಮತ್ತು ಕೀರ್ತಿಯನ್ನು ತಂದಿದ್ದೀರಿ” ಎಂದು ಶ್ರೀ ವ್ಯಾಸ್ ನುಡಿದರು.

ಸ್ವಲ್ಪ ಹೊತ್ತಿನಲ್ಲೇ ಅವರೆಲ್ಲ ತಾರ ತೋಟದತ್ತ ಹೊರಟರು.



# ವಂದನೆ

ಸಂಜೆ, ಮನೆಯ ಮುಂದಿನ ಹುಲ್ಲು ಬೆಳೆದ ಮೈದಾನದಲ್ಲಿ ಇಡೀ ಕುಟುಂಬವೇ ಸೇರಿತ್ತು. ರಾಮು ಮತ್ತು ರಾಣಿ, ನವೀನ್‌ಗೆ ರೀಫ್ ಗಂಟು ಮತ್ತು ಸಾದಾ ಗಂಟುಗಳ ವ್ಯತ್ಯಾಸವನ್ನು ಹೇಳಿಕೊಡುತ್ತಿದ್ದರು. ಜಸ್ವಂತ್ ಮತ್ತು ಕಪಿಲ್ ಕ್ಯಾಂಪಿನ ಬಗ್ಗೆ ಮತ್ತು ಧಾನುವನ್ನು ಕಾಪಾಡಿದ ಬಗ್ಗೆ ರೇಖಳ ಪ್ರಶ್ನೆಗಳಿಗೆ ಉತ್ತರ ಕೊಡುತ್ತಿದ್ದರು.

"ನವೀನ್‌ನ ಮೇಲೆ ನರಿ ಹಾರಿಕೊಂಡು ಹೋದ ಘಟನೆ ಬಹಳ ಸ್ವಾರಸ್ಯವಾಗಿದೆ" ಅಂದಳು ರೇಖ.

"ಆಗ ಅವನ ಮುಖವನ್ನು ನೀನು ನೋಡಬೇಕಾಗಿತ್ತು" ಎಂದು ಕಪಿಲ್ ಮಾತಿನ ಸ್ವಾರಸ್ಯವನ್ನು ಮತ್ತಷ್ಟು ಹೆಚ್ಚಿಸಿದ.

"ನೋಡಿದೆಯಾ ನವೀನ್, ಸ್ಕೌಟ್‌ಗೆ ಸೇರುವುದರಿಂದ ಎಷ್ಟೊಂದು ಪ್ರಯೋಜನ! ಈ ರಜೆಯಲ್ಲಿ ಇದರ ಪ್ರಯೋಜನಗಳನ್ನು ನೀನು ಸಂಪೂರ್ಣವಾಗಿ ತಿಳಿದ ಹಾಗಾಯಿತು. ಸ್ಕೌಟಿಂಗ್‌ನಲ್ಲಿ ನೀನು ಕಲಿಯುವ ಅನೇಕ ವಿಷಯಗಳು ನಿಜಜೀವನದಲ್ಲಿ ನಿನಗೆ ಎಷ್ಟು ಉಪಯೋಗವಾಗುತ್ತದೆ ಅನ್ನುವುದು ನಿನಗೆ ಮನವರಿಕೆಯಾಗಿರಬೇಕು" ಎಂದು ವಿಜಯ ಚಿಕ್ಕಪ್ಪ ಹೇಳಿದರು.

"ಹೌದು. ನನಗೆ ಚೆನ್ನಾಗಿ ಮನವರಿಕೆಯಾಯಿತು" ಅಂದ ನವೀನ್.

"ನಾನು ಹಕ್ಕಿಗಳು ಮತ್ತು ಮರಗಳ ಬಗ್ಗೆ ಬೇಕಾದಷ್ಟು ವಿಷಯಗಳನ್ನು ತಿಳಿದು ಕೊಂಡೆ."

"ಪ್ರಾಣಿಗಳು ಮತ್ತು ಕಾಡು ಹೂವುಗಳ ಬಗ್ಗೆಯೂ" ಎಂದು ರಾಣಿ ಜ್ಞಾಪಿಸಿದಳು.

"ಹೌದು ರಾಣಿ" ಅಂದ ನವೀನ್.

"ನನ್ನ ಸುತ್ತಮುತ್ತಲ ಪ್ರಪಂಚವನ್ನು ಹೊಸ ದೃಷ್ಟಿಯಿಂದ ನೋಡುವುದನ್ನು ನಾನು ಕಲಿತೆ."

"ಆಕಾಶ ಮತ್ತು ನಕ್ಷತ್ರಗಳ ಬಗ್ಗೆಯೂ ಅಷ್ಟೆ" ಎಂದು ಕಪಿಲ್ ಬಾಯಿ ಹಾಕಿದ.

"ಜಸ್ವಂತ್ ಮರಕ್ಕೆ ಹಗ್ಗವನ್ನು ಸುತ್ತುವಾಗ ಹಾಕಿದ ಗಂಟೇ ಬೇರೆ. ಕಪಿಲ್‌ನ ಸೊಂಟಕ್ಕೆ ಸುತ್ತುವಾಗಲೇ ಬೇರೆಯ ಗಂಟನ್ನು ಹಾಕಿದ ಇದನ್ನು ನಾನು ಗಮನಿಸಿದೆ. ಪ್ರಥಮ ಚಿಕಿತ್ಸೆ ಸಲಕರಣೆಗಳ ಉಪಯೋಗವನ್ನು ನಾನು ಅರಿತುಕೊಂಡೆ. ಮರಗೆಲಸವನ್ನು ಕಲಿತಿದ್ದರೆ ಎಷ್ಟು ಪ್ರಯೋಜನ ಅನ್ನುವುದನ್ನು ಕಪಿಲ್ ನನಗೆ ತೋರಿಸಿಕೊಟ್ಟ. ಬೆಂಕಿ ಹಚ್ಚುವುದು ಮತ್ತು ಕಟ್ಟಿಗೆ ಕಡಿಯುವುದನ್ನು ತಿಳಿದುಕೊಂಡೆ.

"ತಟ್ಟೆ ತೊಳೆಯುವುದು" ರೇಖ ನೆನಪು ಮಾಡಿದಳು.

"ಅಡಿಗೆ ಮಾಡುವುದು, ಬೆಂಕಿ ಆರಿಸುವುದು, ತಪ್ಪಿಸಿಕೊಂಡ ಹುಡುಗರನ್ನು ಪತ್ತೆಹಚ್ಚು ವುದು, ಒಂದೇ ಎರಡೇ ಬೇಕಾದಷ್ಟು ವಿಷಯಗಳನ್ನು ಕಲಿತೆ" ಅಂದ ನವೀನ್.

"ಅಂದಹಾಗೆ ಧಾನು ಬಹಳ ಸುಧಾರಿಸಿದ್ದಾನೆ. ಅವನ ತೋಳಿಗೆ ಪ್ಲಾಸ್ಟರ್ ಹಾಕಿದ್ದಾರೆ. ಮೂಳೆ ಮುರಿದಿದೆ. ಆದರೂ ಬೇಗನೆ ಸರಿಹೋಗುತ್ತದೆ. ಅವನು ನಿಮಗೆಲ್ಲ ಪ್ರೀತಿಯ ಕೃತಜ್ಞತೆಗಳನ್ನು ತಿಳಿಸಿದ್ದಾನೆ" ಅಂದರು ವಿಜಯ ಚಿಕ್ಕಪ್ಪ.

"ಈ ವರ್ಷ ನೀನು ನಮ್ಮ ಶಾಲೆಯ ಸ್ಕೌಟ್ ತಂಡಕ್ಕೆ ಸೇರುತ್ತೀಯಾ?" ಕಪಿಲ್ ಕೇಳಿದ.

"ನನ್ನನ್ನು ಸೇರಿಸಿಕೊಳ್ಳುವರೇ?" ಅಂದ ನವೀನ್.

"ನೀನು ಈಗಾಗಲೇ ಬೇಕಾದಷ್ಟು ವಿಷಯಗಳನ್ನು ಕಲಿತುಕೊಂಡಿರುವೆ. ನೀನೊಬ್ಬ ಅತ್ಯುತ್ತಮ ಸ್ಕೌಟ್ ಅನಿಸಿಕೊಳ್ಳುವುದರಲ್ಲಿ ಸಂಶಯವಿಲ್ಲ" ಅಂದರು ವಿಜಯ ಚಿಕ್ಕಪ್ಪ.

"ಮುಂದಿನ ವರ್ಷಕ್ಕೆ ನನಗೆ ಹದಿನೇಳು ವರ್ಷ ವಯಸ್ಸಾಗುತ್ತದೆ. ಆಗ ನಾನು ರೋವರ್ ಆಗಬಹುದು" ಅಂದ ಜಸ್ವಂತ್.

ಅಷ್ಟರಲ್ಲೇ ರೇಖ ಮನೆಯ ಒಳಗೆ ಓಡಿದಳು. ದೊಡ್ಡ ತಟ್ಟೆಯಲ್ಲಿ ತಿಂಡಿಯನ್ನು ಇಟ್ಟುಕೊಂಡು ಹೊರ ಬಂದಳು. "ನನಗೆ ಅಡಿಗೆ ಮಾಡುವುದರಲ್ಲಿ ಬ್ಯಾಡ್ಜ್ ದೊರೆಯುವ ಭರವಸೆ ಇದೆ" ಅಂದಳು.

"ನೋಡಿ, ನಿಮಗೊಂದು ಆಶ್ಚರ್ಯ ಕಾದಿದೆ" ಎಂದು ತಟ್ಟೆ ಮುಂದೆ ಹಿಡಿದಳು. ಅದರಲ್ಲಿ ಬಿಸಿಬಿಸಿ ಹಲ್ವ ಇತ್ತು. ಅದರ ಮೇಲೆ ಬಟಾಣಿ ಕಾಳುಗಳನ್ನು ಈ ರೀತಿ ಜೋಡಿಸಿದ್ದಳು:

ನಮ್ಮ ಈ ಸ್ಕೌಟ್‌ಗಳಿಗೆ ವಂದನೆ,
ಜಸ್ವಂತ್, ಕಪಿಲ್, ನವೀನ್.

